ಪ್ರತಿಭಾ ಗ್ರಂಥಮಾಲಾ—ಧಾರವಾಡ ವರ್ಷ ೫ ಕಿರಣ ೪

# ‘ಪಂಜರದ ಹಕ್ಕಿ’

(ಐದು ಪ್ರಣಯ ಚಿತ್ರಗಳು)



ಮೂಲ ಲೇಖಕರು:

ಶ್ರೀ ಚಾರು ಬಂದ್ಯೋಪಾಧ್ಯಾಯರು.

ಅನುವಾದಕರು:

ಶ್ರೀ ಮಲ್ಲಾರಿ ಮೋವುಂಡಿ.

ಜನೆವರಿ ೧೯೪೪ ● ಬೆಲೆ: ೦—೧೪—೦

ಪ್ರಕಾಶಕರು
ಬಾಲಚಂದ್ರ ಘಾಣೇಕರ
ಪ್ರತಿಭಾ ಗ್ರಂಥಮಾಲೆ, ಧಾರವಾಡ.



Checked 1969





ಮುದ್ರಕರು :
ಶ್ರೀ. ಎಸ್. ಎಲ್. ಜೋಶಿ
ಮೋಹನ ಮುದ್ರಣಾಲಯ, ಧಾರವಾಡ.

# ಅರಿಕೆ

ಗೆಳೆಯ ಶ್ರೀ. ಗುರುನಾಥ ಜೋಶಿಯವರ ‘ ದೇವದಾಸ ’ ವನ್ನು ಹಸ್ತ ಪತ್ರಿಕೆಯ ಅವಸ್ಥೆಯಲ್ಲಿಯೇ ನೋಡುವ ಸಂದರ್ಭ ನನಗೊದಗಿದ್ದು ಸುಯೋಗವೆಂದೇ ಹೇಳಬೇಕು. ಆದರಿಂದಲೇ ಶ್ರೀ ಶರಚ್ಚಂದ್ರರ ಅಲೌಕಿಕ ಕೃತಿಗಳನ್ನು ಓದುವ, ಮೂಲ ಬಂಗಾಲಿಯಲ್ಲಿಯೇ ಅವರ ಕಲೆಯ ಪರಿಚಯ ಮಾಡಿಕೊಳ್ಳುವ ಹಂಬಲ ನನಗುಂಟಾಯಿತು. ಆ ಹಂಬಲ ಕೂತಲ್ಲಿಯೇ ಬಂಗಾಲಿಯನ್ನು ಕಲಿಯುವ ಕಷ್ಟದ ಅಭ್ಯಾಸಕ್ಕೆ ನನ್ನನ್ನು ಹಚ್ಚಿತು. ಹೀಗೆ ಶರಚ್ಚಂದ್ರರ ಕೈಹಿಡಿದು ವಂಗ ಭಾಷೆಯಲ್ಲಿ ಪ್ರವೇಶಿಸಿದಾಗ ಶ್ರೀ ಚಾರು ವಂದ್ಯೋಪಾಧ್ಯಾಯರ ಕೃತಿಗಳೂ ಭೆಟ್ಟಿಯಾದವು. ಅವರಿಬ್ಬರ ತಂತ್ರ, ಪಾತ್ರ ಚಿತ್ರಣ, ಕಥಾನಿರೂಪಣಗಳಿಂದ ಮುಗ್ಧನಾದ ನನಗೆ ಅವುಗಳನ್ನು ಭಾಷಾಂತರಿಸುವ ‘ ಹುಚ್ಚು ’ ಹಿಡಿಯಿತು. ಶರತ್ ಸಾಹಿತ್ಯವನ್ನು ಓದ ಬೇಕೆಂಬ ಕನ್ನಡಿಗರ ‘ ಹುಚ್ಚು ’ ಕನ್ನಡ ಪ್ರಕಾಶಕರ, ಪುಸ್ತಕ ವ್ಯಾಪಾರಿಗಳ ಮುಖಾಂತರ ನನ್ನ ಹುಚ್ಚಿಗೆ ಮದಿರಾಪಾನ ಮಾಡಿಸಿತು. ಈ ಇಬ್ಬರು ವಂಗ

ಲೇಖಕರ ಸಾಮಗ್ರಿಯನ್ನೇ ಅಟ್ಟುಂಡ ನನ್ನ ಜೀವನದ ಕೆಲದಿನಗಳಾದರೂ ಕಳೆದುದಲ್ಲದೆ, ನನ್ನ ಬುದ್ಧಿಗೆ ದೊರೆತ ಆಹಾರವೂ ಅಪಾರವಾಗಿದೆ. ಆದ ಕ್ಕಾಗಿ, ನಾನೀ ಇಬ್ಬರಿಗೆ ಎಷ್ಟು ಅಭಿವಂದಿಸಿದರೂ ತೀರದು. ಅದರಂತೆ ಓದುಗರಿಗೆ, ಪುಸ್ತಕದ ಮಾರಾಟಗಾರರಿಗೆ, ಪ್ರಕಾಶಕರಿಗೆ ತುಂಬ ಕೃತಜ್ಞತೆ ಯನ್ನು ಸಲ್ಲಿಸದಿರಲಾರೆ.

ಶ್ರೀ. ಚಾರು ವಂದ್ಯೋಪಾಧ್ಯಾಯರ ಮೋಹಕವಾದ ಐದು ಪ್ರಣಯ ಚಿತ್ರಗಳನ್ನು ಇಲ್ಲಿ ಕೊಟ್ಟಿದೆ ಐದಕ್ಕೂ ಪ್ರಣಯವೇ ಒಳ ಉಸಿರಾಗಿದ್ದರೂ ಒಂದೊಂದೂ ಒಂದೊಂದು ಬಗೆಯ ಚಿತ್ರವಾಗಿದೆ ಮೊದಲನೆಯ ‘ ಪಂಜ ರದ ಹಕ್ಕಿ ’ ಹೆಣ್ಣುಕಣ್ಣಿಂದ ಕಂಡು ರೂಪಿಸಿದ ಪ್ರಬಂಧವೆನ್ನಬಹುದು. ‘ ಇಂದುಲೇಖೆ ’ ಹತಾಶ ಜೀವಿಯ ಹುಚ್ಚಾಟವಾದರೆ, ‘ ಚಾಯಾ ಓನ್ನಾ ’ ವಿನೋದ ಅಥವಾ ಚೇಷ್ಟೆಯಾಗಿದೆ ‘ ಜೇಬುನ್ನೀಸಾ ’ ಕಾವ್ಯಾತ್ಮಕ ಚಿತ್ರ, ‘ ಸುಕು ’ ಒಂದು ಸಣ್ಣ ಕತೆ— ಹೀಗೆ ಲೇಖಕರು ಐದರಲ್ಲಿ ಐದು ಬಗೆಯ ಕೈವಾಡವನ್ನು ತೋರಿದ್ದಾರೆ. ಜನ ಇವನ್ನು ಮೆಚ್ಚುವರೆಂದು ನಂಬುತ್ತೇನೆ.

ನನ್ನ ಕೆಲಸಕ್ಕೆ ಹೆಚ್ಚಾಗಿ ಆಶ್ರಯವಿತ್ತ ಗೆಳೆಯ ಶ್ರೀ. ಭಾಲಚಂದ್ರ ಘಾಣೇಕರರೇ ಇದನ್ನೂ ತಮ್ಮ ಮಾಲೆಯಲ್ಲಿ ಪೋಣಿಸಿಕೊಂಡುದನ್ನು, ಕೇವಲ ಶಿಷ್ಟಾಚಾರಕ್ಕಲ್ಲ, ಹಾರ್ದಿಕ ಕರ್ತವ್ಯವೆಂದು ನೆನೆಯುತ್ತೇನೆ.

೨೭—೧೨—೧೯೪೭ — ಮುಲ್ಲಾರಿ.

# ಪಂಜರದ ಹಕ್ಕಿ

೧

ಸಹೋದರಿ ಲಲಿತಾ,

ಬಹಳ ದಿವಸಗಳಿಂದ ನಿನ್ನ ಸುದ್ದಿಯಿಲ್ಲ; ನನಗೂ ಕಾಗದ ಬರೆಯುವುದಾಗಿಲ್ಲ. ನನ್ನ ಬಾಳಿನಲ್ಲಿ ಹಲವು ಬದಲಾವಣೆಗಳಾಗಿ ಹೋಗಿವೆ: ಅದೆಷ್ಟೋ ಹೊಸ ಹೊಸ ತಿಳುವಳಿಕೆಗಳನ್ನು ನಾನು ಪಡೆದಿದ್ದೇನೆ. ಎಲ್ಲ ಸುದ್ದಿಗಳನ್ನು ನಿನಗಲ್ಲದೆ ಯಾರಿಗೆ ತಿಳಿಸಲಿ ? ಅದಕ್ಕೇ ನಿನಗೆ ಎಲ್ಲವನ್ನೂ ತೆರೆದು ಹೇಳುವುದಕ್ಕಾಗಿ ನನ್ನ ಮನಸು ವ್ಯಾಕುಲವಾಗಿದೆ.

ನನ್ನ ತಂದೆ ತೀರಿಕೊಂಡಿದ್ದಾರೆ. ಈಗ ನನ್ನ ತಾಯಿ, ತಮ್ಮ, ತಂಗಿಯರ ಪಾಲಕಳು ನಾನೇ. ಈಗ ನನಗೆ ಗೊತ್ತಾಗಿದೆ, ಹೆಂಗಸು ನಿಜಕ್ಕೂ ಅಬಲೆ. ಕವಿಗಳು ಅವರನ್ನು ಬಳ್ಳಿಯೆನ್ನುವರು—ಯಾವಾಗಲೂ ದುರ್ಬಲ, ಪರಾವಲಂಬಿ. ತುಸು ಗಾಳಿ ಸೋಂಕಿದರೆ ಹೊಯ್ದಾಡುವುದು, ತುಸು ಪೆಟ್ಟು ತಗುಲಿದರೆ ನೆಲಕ್ಕೆ ಬೀಳುವುದು. ನಾನವರನ್ನು ಹೊಳೆಯ ಪ್ರವಾಹಕ್ಕೆ ಹೋಲಿಸುವೆ—ತಡಿಯ ಕಟ್ಟಿನಲ್ಲಿರುವವರೆಗೇ ಅದರ ಗತಿ ಮನೋಜ್ಞ, ಸುಂದರ, ಆವರೆಗೇ ಸಜೀವವಾದ, ವಿಪುಲವಾದ, ಆನಂದಮಯವಾದ, ಸೌಂದರ್ಯಮಯವಾದ ಹಾಸ್ಯಧಾರೆ; ಆವರೆಗೇ ಆದರಿಂದ ಆನಂದವನ್ನು ಹೊಂದುವೆನೆಂಬ ಆಶೆ. ದಂಡೆಯು ಮೇಲ್ವಾಯ್ದು ಹರಿಯಿತೋ ತಾನೂ ಲಯವಾಗುವುದಲ್ಲದೆ ಅನ್ಯರನ್ನೂ ಮುಳುಗಿಸುವುದು; ಸುತ್ತುಮುತ್ತಲಿನ ಆನಂದ-ಸೌಂದರ್ಯ-ಹೃದಯೋಲ್ಲಾಸಗಳನ್ನು ನಷ್ಟಗೊಳಿಸಿಬಿಡುವುದು. ಇಂತಹ 'ಹೆಣ್ಣುತನ'ವನ್ನು ಹೊತ್ತುಕೊಂಡೇ ನಾವು ಹುಟ್ಟಿದ್ದೇವೆ—ವಿಶೇಷತಃ ಈ ಬಡ ಭಾರತ ದೇಶದಲ್ಲಿ. ನನ್ನಂತಹ ಈ ಬಗೆಯ ಅಕ್ಷಮಳ ಮೇಲೆ ದೇವರು ಇಂದು ನಿಲೆ-

ದಪ್ಪಿದ ಸಂಸಾರವನ್ನು ಹೇರಿದ್ದಾನೆ. ನಾನು ಪ್ರಪಂಚದೊಡನೆ ಹೋರಾಡಬೇಕಾಗಿದೆ! ಹೆರವರ ಮೇಲೆ ನಿರ್ಭರಳಾಗಿರುವ ಆಶೆಯನ್ನು ಬಿಟ್ಟು ಹೆರವರ ಹೊರೆಯನ್ನು ಹೊರಬೇಕಾಗಿದೆ!

ಅನ್ನವನ್ನು ಹುಡುಕುವುದಕ್ಕಾಗಿ ನಾನು ಮನೆ ಬಿಟ್ಟು ಹೋಗಬೇಕಾಗಿದೆ. ಎಲ್ಲಿದೆ ಅನ್ನ? ಹೇಗೆ ದೊರಕಿಸುವುದು? ನನಗೆ ಯಾವ ಉಪಾಯ ಗೊತ್ತಿದೆ? ಗಂಡಸರು ಕಣಜವನ್ನು ತುಂಬುತ್ತಿರುವಷ್ಟು ಕಾಲ ಮಾತ್ರ ನಾವು ಅನ್ನಪೂರ್ಣೆಯರು. ನಾವು ಚಿರಕಾಲ ಪಂಜರದಲ್ಲಿರುವೆವು; ನಮ್ಮನ್ನು ಸಾಕಿ ಸಲಹುವವರು ತಮ್ಮ ಲಹರಿಯಂತೆ ಮನಸು ಬಂದಾಗ ಒಂದಿಷ್ಟು ಹಣ್ಣು-ಹಾಲು-ನೀರು ಇಟ್ಟು ಹೋಗುವರು; ನಾವು ಒಳ್ಳೇ ನಿಶ್ಚಿಂತರಾಗಿದ್ದು, ಆಗಾಗ ಹಾಡುತ್ತ ಮನೆಯನ್ನು ಇಂಚರದಿಂದ ತುಂಬುವೆವು. ಪಂಜರದಲ್ಲಿ ಬದ್ಧನಾಗಿ ಪ್ರಾಣವು ಚಡಪಡಿಸುವುದಿಲ್ಲವೆಂದಲ್ಲ. ತಂತಿಗಳ ಸಂದಿನೊಳಗಿಂದ ಮುಕ್ತ ಆಕಾಶದ ನೀಲಸೃಷ್ಟಿಯ ಇಂಗಿತವನ್ನೂ ತರುಣಪಲ್ಲವಗಳ ಕೈಸನ್ನೆಯನ್ನೂ ಕಂಡು ಮನವು ಹುರುಹುರು ಎನ್ನುವುದು. ಆದರೆ ಎಂದಾದರೂ ಪಂಜರದ ಬಾಗಿಲನ್ನು ತೆರೆದರೂ ಹಾರಲು ಸಾಹಸವಾಗುವುದಿಲ್ಲ. ಹೃದಯ ವಿಹ್ವಲವಾಗುವುದು, ರೆಕ್ಕೆಗಳಲ್ಲಿ ಸತುವೇ ಇಲ್ಲದಂತಿರುತ್ತದೆ. ಪಂಜರದ ಒಡೆಯನು ಅದರ ಬಾಗಿಲನ್ನು ತೆರೆದು ಹಿಡಿದು, ಹಾರೆಂದು ಹೇಳಿದರೂ ಆತನ ಉದ್ದೇಶದಲ್ಲಿಯೇ ಸಂದೇಹವುಂಟಾಗುತ್ತದೆ. ಅಷ್ಟೊಂದು ದೊಡ್ಡ ಬಟ್ಟಬಯಲೊಳಗೆ ನನ್ನಂತಹ ಅಂಜುಗುಳಿ ಪ್ರಾಣಿಗೆ ಆಶ್ರಯವೆಲ್ಲಿ ದೊರಕೀತು, ಹಸಿದರೆ ಅನ್ನವೆಲ್ಲಿ ಸಿಕ್ಕೀತು, ಬಾಯಾರಿದರೆ ನೀರೆಲ್ಲಿ ಲಭಿಸೀತು ಎಂಬ ಗಾಬರಿ,ದಿಗಿಲು. ಗುರುತಿಲ್ಲದಲ್ಲಿ ಸರಳವಾದ ಹಾದಿಯೂ ಡೊಂಕಾಗಿ ಕಾಣುವುದು, ನಿರೀಹ ವಸ್ತುವನ್ನು ಕಂಡರೂ ಹೆದರಿಕೆಯೆನಿಸುವುದು. ಸಹಜ ಘಟನೆಯೂ ವಿಪತ್ತಿನ ಸೂಚನೆಯೆಂದು ಭಾಸವಾಗುವುದು. ಅಂತೆಯೆ, ಒಡೆಯನಿಲ್ಲದಾದಾಗ, ನಾವು ಪಂಜರದೊಳಗೆ ಕುಳಿತಲ್ಲಿಯೇ ಸೊರಗಿ ಒಣಗಿ ಸಾಯುತ್ತೇವೆಯೇ ಹೊರತು, ಹೊರಬಿದ್ದು ಹೋಗಿ ಬದುಕಲು ಹವಣಿಸಲಾರೆವು.

ಸೋದರಿ, ನಾನು ಅಸಾಧ್ಯವನ್ನು ಸಾಧಿಸಿದ್ದೇನೆ; ಹೊರಬಿದ್ದಿದ್ದೇನೆ.

ಹೊರಹೊರಟೊಡನೆ ನನಗೆ ಎಲ್ಲಕ್ಕಿಂತ ಹೆಚ್ಚು ಭಯವೆನಿಸಿದ್ದು ಗಂಡಸರದು. ಸಂಬಂಧಿಕರಲ್ಲದ ಪುರುಷರ ಪರಿಚಯವೇ ನಮಗಿರಲಿಲ್ಲವೆನ್ನಬೇಕು. ತಂದೆ-ಕಕ್ಕಂದಿರ ತೊಡೆಯ ಮೇಲೆಯೆ ನಾವು ಬೆಳೆದವರು, ತಮ್ಮ-ಕಕ್ಕನ

ಮಕ್ಕಳು ನಮ್ಮ ತೊಡೆಯ ಮೇಲೆ ಆಡುವವರು; ಅವರ ಪರಿಚಯಮಾಡಿಕೊಳ್ಳುವುದು ಅಗತ್ಯವೇ ಇಲ್ಲ. ಪರಿಚಯ ಮಾಡಿಕೊಳ್ಳಬೇಕಾಗುವುದು, ಹೊಸ ಮನುಷ್ಯನನ್ನು. ಅವನನ್ನು ಕಂಡು ಮೊದಮೊದಲು ಭಯವಾದರೂ ಅವನು ಒಬ್ಬನಾಗಿದ್ದರೆ ಧೈರ್ಯವಿರುತ್ತದೆ. ಆದರೆ ಒಮ್ಮೆಲೆ ಗಂಡುಸರ ಸಂತೆಯೊಳಗೆ ಒಯ್ದು ಬಿಟ್ಟುಬಿಟ್ಟರೆ, ಸಿಂಹದ ಪಂಜರದೊಳಗಿನ ರೋಮನ್ ಗ್ಲಾಡಿಯೆಟರನಂತೆ ನಮ್ಮ ಸ್ಥಿತಿಯಾಗುವುದು—ಎಂತಹ ಮಹಾ ವೀರನಾಗಲಿ, ಸಾಹಸಿಯಾಗಲಿ, ಪರಾಭವವು ತಿಳಿದದ್ದೇ, ಸಾವು ಕಟ್ಟಿಟ್ಟದ್ದೇ. ಹಿಂದಿನ ಕಾಲದ ರಾಜಕನ್ನೆಯರು ತಮ್ಮ ಪತಿಯನ್ನಾರಿಸಲು ಸ್ವಯಂವರ ಸಭೆಗೆ ಹೇಗೆ ಬರುತ್ತಿದ್ದರೋ ಎಂದು ನನಗೆ ಆಶ್ಚರ್ಯ. ಭಯವಿಹ್ವಲರಾಗುತ್ತಿರಲಿಲ್ಲವೆ? ಗಡ್ಡ-ಮೀಸೆ ಹೊತ್ತುಕೊಂಡು, ಸುತ್ತುಕಡೆಯೂ ಆಂಬುರಕ ಪಕ್ಷಿಗಳಂತೆ ಅಷ್ಟು ಗಂಡಸರು ಕಣ್ಣು ಬಿಟ್ಟುಕೊಂಡು ಹೊಂಚು ಹಾಕಿ ಕುಳಿತಿರುವಾಗ, ನಡುವೆ ನಿಂತು ಯಾರನ್ನು ಆರಿಸಬೇಕು? ಭಯ-ಲಜ್ಜೆಗಳಿಂದ ಆ ಕಡೆ ನೋಡುವುದೂ ಅಸಾಧ್ಯ! ಆದರೂ ಅವರೆಲ್ಲರೂ ಲೋಲುಪರಾಗಿ ಅವಳ ಕಡೆ ನೋಡುತ್ತಿರುವರು. ನನಗಂತೂ ನೆನೆದರೆ ಮೈಮೇಲೆ ಮುಳ್ಳು ಬರುತ್ತವೆ. ನಿಜವಕ್ಕಾ, ಪುರುಷರ ನೋಟ ಚೇಳಿನ ಕೊಂಡಿಯೋ ಏನೋ!

ಶೀಯಾಲದಾ ನಿಲ್ದಾಣದಲ್ಲಿ ಟಿಕೇಟು ಮಾರುವ ಕೆಲಸ ನನಗೆ ಸಿಕ್ಕಿದೆ. ಸಣ್ಣ ಸಂಬಳ. ದಿನಾಲು ಬಂಡಿ ಮಾಡಿಕೊಂಡು ಕಚೇರಿಗೆ ಹೋಗುವುದು ಸಾಧ್ಯವಿಲ್ಲ, ಟ್ರಾಮೇ ಗತಿ. ಮೊದಲ ಸಲ ಟ್ರಾಮಿನಿಂದ ಹೋಗಲೆಂದು ಹೊರಬಿದ್ದಾಗ ನನ್ನ ಮನಸಿನ ಅವಸ್ಥೆ ಹೇಗಾಗಿತ್ತೆಂದು ಅಂತರ್ಯಾಮಿಯೊಬ್ಬನೇ ಬಲ್ಲ. ಕೊಲ್ಲಂಬವನ್ನೇರುವ ಮನುಷ್ಯನ ಮನಸು ಹೀಗೆಯೇ ಆಗುತ್ತಿರಬೇಕು. ಕಾಲಿಗೆ ಕಾಲು ತೊಡರುತ್ತಿದ್ದವು; ತುಟಿ ಒಣಗುತ್ತಿದ್ದವು; ಹೃದಯ ಅಕಾರಣ ಲಜ್ಜೆಯಿಂದ ಹೇಗೆ ಹೇಗೋ ಆಗುತ್ತಿದ್ದಿತು. ನಾನು ದಬ್ಬಾಳಿಕೆಯಿಂದಲೇ ನನ್ನನ್ನೆಳೆದುಕೊಂಡು ಹೋಗಿ ಟ್ರಾಂ ನಿಲ್ದಾಣದ ಹತ್ತಿರ ಕಾಲ್ದಾರಿಯ ಅಂಚಿನಲ್ಲಿ ನಿಂತೆ.

ಪುರುಷ ಪಥಿಕರಲ್ಲಿ ಪಕ್ಕನೆ ಚಳವಳವುಂಟಾಯಿತು. ದೇವರು ತಲೆಯ ಹಿಂಬದಿಯಲ್ಲಿಯೂ ಕಣ್ಣುಗಳನ್ನು ಕೊಡಲಿಲ್ಲ; ಅದು ಸುದೈವವೆನ್ನಬೇಕು. ಹಿಂದುಮುಂದೆರಡೂ ಕಡೆಯ ಗಂಡುಸರ ಕೋತಿತನವನ್ನು ನೋಡುವಂತಾಗಿ

ದ್ದರೆ ಒಮ್ಮೆಲೇ ಹುಚ್ಚು ಹಿಡಿಯುವುದೇ ಸರಿ. ಒತ್ತಟ್ಟಿನ ಎಷ್ಟೋ ಚೇಷ್ಟೆಗಳು ಕಾಣದಿರುವುವೆಂದೇ ಅರ್ಧ ಸುರಕ್ಷಿತ !

ಟ್ರಾಮನ್ನೇರಿದ ಮೇಲಾದರೂ ನಿಸ್ತಾರವುಂಟೆ? ನಾನು ಟ್ರಾಮಿನ ಅಡಿಹಲಗೆಯ ಮೇಲೆ ಕಾಲಿಡುತ್ತಲೂ ಗಂಡಸರ ಕತ್ತುಗಳು ನಿಡಿದಾಗುವುವು—ಯಾವ ಕಂಪಾರ್ಟ್ಮೆಂಟಿನಲ್ಲಿ ಹೋಗಬೇಕೋ ನನಗೆ ತಿಳಿಯದಂತಾಗುವುದು.

ಪುರುಷರೆಂದರೆ ಅಂತಹ ಹಾಸ್ಯಕಾರಕ ಪ್ರಾಣಿಗಳಕ್ಕ; ಅವರನ್ನು ನೋಡಿದರೆ ನನಗೆ ಗಾಂಭೀರ್ಯವನ್ನು ಕಾಯ್ದುಕೊಳ್ಳುವುದೇ ಕಠಿನವಾಗುವುದು. ಅವರ ಮೇಲೆ ಅವರು ಬಗೆಬಗೆಯ ಭಂಗಿಗಳಿಂದ ಜನರನ್ನು ನಗಿಸುವರು ಬೇರೆ; ಅದೇಕೋ ಹೇಳಲಾಗದು.

ಮೊದಲ ನೋಟಕ್ಕೇ ಅವರ ವಿಕಟಮೂರ್ತಿಯ ವಿಚಿತ್ರ ರೂಪ ಅತ್ಯಂತ ಕೌತುಕಕರವೆನಿಸಿತು. ಯಾರ ಮೋರೆಯ ಮೇಲೆ ಗಡ್ಡ-ಮೀಸೆಗಳ ದಟ್ಟಡವಿ—ಒಳಗಡೆ ಹೊಂಚಿ ಕುಳಿತ ಕಾಡುಬೆಕ್ಕಿನಂತಹ ಕಣ್ಣುಗಳು. ಯಾರು ಗಡ್ಡ ಮಾಡಿಸಿದ್ದಾರೆ, ಮೀಸೆಗಳು ಮಾತ್ರ ಮುಖದ ಬಾಗಿಲಿಗೆ ಮೇಲೆ ಕಸಪೊರಕೆಗಳ ತೋರಣದಂತೆ ಜೋತಾಡುತ್ತಿವೆ. ಯಾರು ಗಡ್ಡ-ಮೀಸೆಗಳೆರಡನ್ನೂ ಸಮೂಲವಾಗಿ ತೆಗೆದಿರುತ್ತಾರೆ; ನಮ್ಮ ಮುಖದ ಅನುಕರಣ ಮಾಡಬೇಕೆಂದು ಅವರಿಚ್ಛೆ; ಆದರೆ ಅವನ್ನು ಸವರಿದ ಮಾತ್ರಕ್ಕೆ ಆ ಒರಟು ಮೋರೆ ನುಣುಪಾಗಬೇಕೇಕೆ ? ಕೆಲಕೆಲವರಿಗೆ ಅದು ಕೆಟ್ಟ ಕಾಣುವುದಿಲ್ಲ ನಿಜ, ಬಹು ಜನಕ್ಕೆ ಅದು ಅಸಡ್ಡಾಳವಾಗಿರುವುದು. ಯಾರು ಗಡ್ಡ-ಮೀಸೆ ಎರಡೂ ಅಂಶತಃ ಕತ್ತರಿಸುತ್ತಾರೆ; ಅದು ಅಷ್ಟು ಕೆಟ್ಟ ಕಾಣುವುದಿಲ್ಲ. ಪಾಪ, ಗಂಡಸರಿಗೆ ತಮ್ಮ ಗಡ್ಡ-ಮೀಸೆಗಳ ಸಮಸ್ಯೆಯೇ ಬಗೆಹರಿಯದಂತಾಗಿದೆ. ಅಡವಿ ಬೆಳಸಬೇಕೋ, ಬೋಳಿಸಬೇಕೋ, ಕತ್ತರಿಸಬೇಕೋ ಯಾವುದೂ ಖಂಡಿತ ತಿಳಿಯಲೊಲ್ಲದು ಅವರಿಗೆ.

ಉಡಿಗೆ-ತೊಡಿಗೆಗಳಲ್ಲಿಯೂ ಎಷ್ಟು ವೈಚಿತ್ರ್ಯ ! ತಮಗೆ ಯಾವುದು ಒಪ್ಪುತ್ತದೆಂದು ಅವರಿಗಿನ್ನೂ ತಿಳಿದೇ ಇಲ್ಲ. ಕೆಲವರು ಸಂಪೂರ್ಣ ಸಾಹೇಬೀ ವೇಷ ಧರಿಸುತ್ತಾರೆ—ಆದರೆ, ಚಣ್ಣ ಬಿಗಿತಾಗಿದ್ದರೆ ಕೋಟು ಸಡಿಲಾಗಿರುತ್ತದೆ, ಟಾಯಿ ಸೊಟ್ಟಾಗಿದ್ದರೆ ಕಾಲರು ಶರ್ಟನ್ನು ಬಿಟ್ಟು ಎದ್ದಿರುತ್ತದೆ, ಹ್ಯಾಟು ಹಳೆಯದಾಗಿ ನಾಶಿಸಿದ್ದು—ಆದರೂ ಸಾಹೇಬೀ ವೇಷವೇ ಆಗಬೇಕು !

ಕೆಲವರು ಅಂಗಿ ತೊಟ್ಟು ಚಾದರ ಹೊರುತ್ತಾರೆ, ತಲೆಯ ಮೇಲೆ ಏನೂ ಇಲ್ಲ. ಕೆಲವರು ಕೋಟು ಧರಿಸುತ್ತಾರೆ, ಕೆಲವರು ಶರ್ಟು ತೊಡುತ್ತಾರೆ, ಕೆಲವರು ಪೈರಣು ಹಾಕುತ್ತಾರೆ. ಕೆಲವರ ಅಂಗಿ ಬೆವರು ಎಣ್ಣೆಗಳಲ್ಲಿ ಕಳಿತು, ಅದರ ನಾತ ಹತ್ತಿರದ ಜನರನ್ನು ಎದ್ದೋಡಿಸುತ್ತದೆ; ಆದರೂ ಒಗೆಯಲು ಕೊಡುವ ಅವಸರವಿಲ್ಲ. ಕೆಲವರ ಬಟ್ಟೆಗಳ ಮೇಲೆ ತೊಂಬಲದ ರಸದ ಕಲೆಗಳು.... ಈ ಹಿಂಡಿನಲ್ಲಿ ಒಬ್ಬಿಬ್ಬರು ಒಳ್ಳೇ ಸದ್ಗೃಹಸ್ಥರಂತೆ ಓರಣ-ಅಚ್ಚುಕಟ್ಟುಳ್ಳವರನ್ನು ಕಾಣಬಹುದು.

ಟ್ರಾಮಿನಲ್ಲಿ ಹತ್ತಿಹೋದರೆ, ಸರಿದು ನನಗೆ ಸ್ವಲ್ಪ ಸ್ಥಳ ಮಾಡಿಕೊಡಬೇಕೆಂಬ ತಿಳಿವಳಿಕೆಯೂ ಗಂಡು ಮಿಕಗಳಿಗಿರುವುದಿಲ್ಲ; ಎಲ್ಲರೂ ಆ ಎಂದು ಕಣ್ಣಿಂದ ನನ್ನನ್ನು ನುಂಗುವರೋ ಎಂಬಂತೆ ಕೂತಿರುತ್ತಾರೆ; ನಾನು ಇದೇ ಚಂದ್ರಲೋಕದಿಂದ ಇಳಿದು ಬಂದವಳೆಂದೋ ಏನೊ; ಅವರ ಹಿಂದಿನ ಹದಿನಾಲ್ಕು ತಲೆಮಾರಿನವರೂ ಹೆಂಗುಸರ ಮೋರೆಯನ್ನೇ ನೋಡಿಲ್ಲವೋ ಏನೋ. ಪುರುಷರ ಆಗಿನ ಎಚ್ಚರಿಲ್ಲದ ಚಂಚಲ ಭಾವವನ್ನು ನೋಡಿ, ಹಿಂದಿನ ಕಾಲದ ಸ್ವಯಂವರ ಸಭೆಯು ನಿಚ್ಚಳವಾದ ಚಿತ್ರ ನನ್ನ ಮನದೆದುರು ಮೂಡುತ್ತದೆ. ಕಾಲಿದಾಸನ ಇಂದುಮತೀ ಸ್ವಯಂವರದ ಸಭೆಯ ವರ್ಣನೆಯಲ್ಲಿ ಕಿಂಚಿತ್ತೂ ಅತ್ಯುಕ್ತಿಯಿಲ್ಲವೆಂದು ನನಗೀಗ ಚೆನ್ನಾಗಿ ಮನವರಿಕೆಯಾಗಿದೆ.

ಜನರನ್ನು ಒತ್ತಿಸರಿಸಿ ಇಂಬು ಮಾಡಿಕೊಂಡು ಕುಳಿತರೂ ಬಿಡುಗಡೆಯಿಲ್ಲ. ಆಮೇಲೆ ಟ್ರಾಮಿನಲ್ಲಿ ಬರುವವರಲ್ಲಿಯೂ ಬಗೆಬಗೆಯ ಮನೋಧರ್ಮದ ಆಟಗಳನ್ನು ಕಂಡೆ. ಕೆಲವರು ನಾನು ಕುಳಿತಿದ್ದ ಕಡೆಗೇ—ಜನ ಕಿಕ್ಕಿರಿದು ತುಂಬಿದ್ದರೂ— ನುಗ್ಗಿ ಬರುವರು; ಬೇರೆ ಕಡೆ ಸ್ಥಳ ತೆರವಿದ್ದರೂ ಅಲ್ಲಿ ಹೋಗುವುದಿಲ್ಲ. ಕೆಲವರು ನಾನು ಕುಳಿತ ಭಾಗದ ಎದುರಿನ ಭಾಗದಲ್ಲಿ, ನನಗೆ ಎದುರುಬದುರಾಗುವಂತೆ ಪ್ರಯತ್ನಪೂರ್ವಕವಾಗಿ ಸ್ಥಳ ಹಿಡಿದು ಕುಳಿತುಕೊಳ್ಳುವರು ಮತ್ತೆ ಕೆಲವರು, ಹಿಂದಿನ ವಿಭಾಗದಲ್ಲಿ ನನ್ನ ಬೆನ್ನಿಗೆ ಹೊಂದಿದ ಪೀಠದಲ್ಲಿ ಕುಳಿತುಕೊಳ್ಳುವರು; ನಾನಾ ರೀತಿಯ ಭಂಗಿಯಲ್ಲಿ ಹೊಯ್ದಾಡುತ್ತ ಕುಚೇಷ್ಟೆ ನಡೆಸುವರು. ಇನ್ನು ಕೆಲವರಿದ್ದಾರೆ, ಶ್ರೀಚೈತನ್ಯದೇವರ ಅವತಾರಗಳೇ. ಅವರು ಒಂದು ಬಗೆಯ ಅತಿಗೌರವದ ತಟಸ್ಥ ಭಾವವನ್ನು ತೋರಿ, ದೂರ ಸಿಡಿದು ಹೋಗಿ ಮೋರೆ ತಗ್ಗಿಸಿಕೊಂಡು ಕುಳಿತುಕೊಳ್ಳುವರು;

ಸ್ತ್ರೀಜಾತಿಯಲ್ಲಿ ಅವರು ಅಷ್ಟೊಂದು ಅತಿ ಗೌರವಶೀಲರು—ಪ್ರಾಯಶಃ ಅದು ಉದಾಸೀನತೆಯಿಂದೇ ಹೇಳಬಹುದು. ಅವರ ಅಸಡ್ಡಾಳ ನಡತೆಯನ್ನು ಕಂಡು ನನಗೆ ನಗೆಯನ್ನು ತಡೆಯುವುದೇ ಕಠಿನವಾಗುವುದು. ಯಾವುದೂ ಅತಿ ಯೆಂಬುದೇ ಕೆಟ್ಟ. ಅಗೌರವವನ್ನು ಪ್ರಕಟಗೊಳಿಸುವುದು ಪುರುಷ ಚರಿತ್ರೆಯ ಅಸಭ್ಯತನದ ಒಂದು ಬದಿಯಾದರೆ, ಅತಿ ಸನ್ಮಾನಶೀಲರು ಆ ಭಂಡತನದ ಇನ್ನೊಂದು ಬದಿಯನ್ನು ತೋರುವರಷ್ಟೆ. ನಾರಿಯರ ದರ್ಶನದಿಂದ ತಮ ಗಾಗುವ ಆನಂದವನ್ನು, ಅವರ ಸಹವಾಸದಿಂದಾಗುವ ಸೊಗಸನ್ನು ಬಚ್ಚಿ ಡಲು ಪ್ರಯತ್ನಿಸದವರು— ಆದರೂ ಅದನ್ನು ಅಸಹ್ಯ ಅಶಿಷ್ಟ ರೀತಿಯಿಂದ ಪ್ರಕಾಶಪಡಿಸದವರು—ಎಲ್ಲಿಯೋ ಯಾವಾಗಲೋ ಒಬ್ಬರಿಬ್ಬರು ಕಾಣಸಿಕ್ಕು ವರು. ಅವರು ಹೆಣ್ಣನ್ನು ಪ್ರೀತಿಸಿಯೂ ಪ್ರೀತಿಸುವರು, ಗೌರವಿಸಿಯೂ ಗೌರ ವಿಸುವರು. ಅಂತಹ ಒಬ್ಬ ಪುರುಷನ ವಿಷಯವನ್ನು ಆಮೇಲೆ ಹೇಳುತ್ತೇನೆ; ಆತ ನನಗೆ ಸೇರಿದ. ಸೇರಿದ ಎಂದರೆ ನೀನು ನಗುವುದಲ್ಲವೆ ಬಹುಶಃ? ಆದರೆ ಸೇರಿಕೆ ಎಂದರೆ ಪ್ರೇಮವಲ್ಲ; ಮೊದಲೇ ಹೇಳಿರುತ್ತೇನೆ ನಿನಗೆ.

ಟ್ರಾಮಿನಿಂದಿಳಿಯುವಾಗಲೂ ಇದೇ ಹಾಡು. ಪುರುಷರ ಲೀಲಾಚತು ರತೆಯ ಪೂರ್ಣದರ್ಶನ ತಪ್ಪುವುದಿಲ್ಲ. ಕೆಲವರಂತೂ ನನ್ನ ಹತ್ತಿರ ಹಾಯು ವಾಗ ನನ್ನಡಿಯ ಮೇಲೆ ಕರವಸ್ತ್ರವನ್ನು ಕೆಡವಿ, ಎತ್ತಿಕೊಂಡು ತುಟಿಯೊರಸಿ ಕೊಳ್ಳುವರು. ನಾನು ಇಳಿದೊಡನೆ ಎಲ್ಲರ ಮುಖಗಳೂ ಕಿಡಿಕಿಯೊಳಗೆ ಹಾಯುವವು—ನಾನು ಯಾವ ದಾರಿ ಹಿಡಿಯುತ್ತೇನೆ, ಎಲ್ಲಿಗೆ ಹೋಗುತ್ತೇನೆ ಎಂದರಿತುಕೊಳ್ಳುವ ಹಂಬಲ. ನನ್ನನ್ನು ಯಾವ ಮಹಾರಹಸ್ಯ ಆವರಿಸಿ ದೆಯೋ ಏನೋ! ಅದನ್ನು ಭೇದಿಸಿ, ಒಳಗಡಗಿದ್ದ ಕತೆಯನ್ನು ತಿಳಿದು ಕೊಳ್ಳಲು ಎಲ್ಲರ ಹವಣಿಕೆ.

ಪುರುಷರು ಹೀಗಿರುವುದಕ್ಕೆ ಪ್ರಕೃತಿಯೆ ಉತ್ತರದಾಯಿ. ಪ್ರಕೃತಿದತ್ತ ಪ್ರವೃತ್ತಿಗಳನ್ನು ಒಪ್ಪವಾಗಿ ಆಳವಡಿಸಿಕೊಳ್ಳುವುದಕ್ಕೆ ಅಸಮರ್ಥರಾಗಿರುವ ರಲ್ಲಾ ಎಂದು ಅವರ ಬಗ್ಗೆ ಮರುಕವುಂಟಾಗುತ್ತದೆ; ಅವರ ಮೇಲೆ ಸಿಟ್ಟು ಬರುವುದಿಲ್ಲ—ವಿಶೇಷತಃ ನಮ್ಮ ದೇಶದ ಪುರುಷರ ಮೇಲೆ. ಪಾಪ, ಮತ್ತೊ ಬ್ಬರ ಮನೆಯ ಹೆಣ್ಮಕ್ಕಳ ಮೋರೆಯನ್ನೇ ನೋಡಿರಲಿಕ್ಕಿಲ್ಲ; ತಮ್ಮ ಹೆಂಡತಿಯ

ಮುಖವನ್ನಾದರೂ ಚೆನ್ನಾಗಿ ನೋಡಿದ್ದಾರೆಂದೂ ಎನಿಸುವುದಿಲ್ಲ. ಸಿಕ್ಕಲಾರದ ಒಡವೆಯ ವಿಷಯದಲ್ಲಿ ಲೋಲುಪತೆಯಿರುವುದು ಸ್ವಾಭಾವಿಕವೇ.

ಸ್ತ್ರೀಯರ ವಿಷಯದಲ್ಲಿ ಪುರುಷರಿಗಿದ್ದ ಈ ಅನುರಾಗದ ಅತಿರೇಕದಿಂದ, ಆಸಕ್ತಿಯಿಂದ ಸ್ತ್ರೀಯರು ಬಾಯಲ್ಲಿ ಎಷ್ಟೇ ಕೋಪ ತೋರಲಿ, ಒಳಗೊಳಗೆ ಒಳ್ಳೇ ಸಂತುಷ್ಟರೇ ಆಗುವರು ತಾವು ಮೆಚ್ಚಿನವರಾಗಿದ್ದೇವೆ, ಆರಾಧ್ಯರಾಗಿದ್ದೇವೆ ಎಂಬ ಸಂಗತಿಯಿಂದ ಆನಂದವಾಗುವುದು ಸ್ವಾಭಾವಿಕ. ನನಗಂತೂ ಸಂತೋಷವೆಂಬುದನ್ನು ಸ್ಪಷ್ಟವಾಗಿ ಒಪ್ಪಿಕೊಳ್ಳುತ್ತೇನೆ. ಪುರುಷರು ಸ್ತ್ರೀಯರಲ್ಲಿ ಇಷ್ಟು ಆದರ-ಶ್ರದ್ಧೆ ತಳೆಯುವುದಕ್ಕೆ ನನಗೆ ಇನ್ನೊಂದು ಕಾರಣ ತೋರುತ್ತಿದೆ ತಾವು ಪ್ರಬಲರು, ನಾವು ಅಬಲೆಯರು; ತಾವು ಆಶ್ರಯ, ನಾವು ಆಶ್ರಿತೆಯರು ಎಂಬುದೇ ಆ ಕಾರಣ. ಸಂಸಾರದೊಡನೆ ಅಡಿಗಡಿಗೆ ಒದಗುವ ಸಂಘರ್ಷಣೆಯಲ್ಲಿ ತಿಳಿವಳಿಕೆಯಿಂದ, ಪರಸ್ಪರ ಸಮ್ಮತದಿಂದ ನಡೆಯಬೇಕಾಗುವುದರಿಂದ ಪುರುಷರಲ್ಲಿ ಸಹನಗುಣ ಮತ್ತು ಸಭ್ಯತೆ ಚರಿತ್ರಗತವಾಗಿವೆಯೆಂದೂ ಹೇಳಬಹುದು. ನಮಗೊಬ್ಬ ಅಪರಿಚಿತ ಸ್ತ್ರೀಯ ಭೆಟ್ಟಿಯಾದಾಗ ಇದು ವಿಶೇಷವಾಗಿ ನಮ್ಮ ಅನುಭವಕ್ಕೆ ಬರುವುದು. ಆಕೆ ನಮ್ಮನ್ನು ಮನ್ನಿಸುವುದೇ ಇಲ್ಲ. ಅದೇ ಗಂಡುಸಾದರೆ ನಮ್ಮ ದರ್ಶನದಿಂದ ತಾನು ಕೃತಾರ್ಥನೆಂದು ಭಾವಿಸುವ. ಪುರುಷರ ಈ ಸಭ್ಯತೆ ನಮ್ಮ ವಿಷಯದಲ್ಲಿ ಮಾತ್ರವೆಂದಲ್ಲ, ಸ್ವಜಾತಿಯ ವಿಷಯದಲ್ಲಿಯೂ ಸಾಕಷ್ಟು ಕಂಡು ಬರುವುದು. ಬಹಳ ಮಂದಿ ಅಪರಿಚಿತ ನಾರಿಯರು ಒಂದೆಡೆ ಸೇರುವ ಸಂದರ್ಭದಲ್ಲಿ, ಮೈಗೆ ಮೈ ಸ್ವಲ್ಪ ತಾಗಿದರೆ, ಬಟ್ಟೆಯ ಮೇಲೆ ಕಾಲು ಕೈ ಬಿದ್ದರೆ ತೀರಿಯೇ ಹೋಯಿತು; ತಪ್ಪು ಮಾಡಿದವಳು ಕ್ಷಮೆ ಬೇಡುವ ಶಿಷ್ಟಾಚಾರವನ್ನು ಅರಿಯಳು; ತೊಂದರೆ ಪಟ್ಟವಳೂ ಕ್ಷಮಿಸುವ ಗುಣವನ್ನರಿಯಳು. ಒಂದು ಸಣ್ಣ ಕಾರಣದಿಂದ ಜಗಳ ಹುಟ್ಟಿ ಕಲೆಲೆಲೆ ಗೊಂದಲವೇ ಆಗುವುದು. ಆದರೆ ಟ್ರಾಮಿನಲ್ಲಿ ನಾನು ಬಹುಶಃ ನೋಡುತ್ತೇನೆ— ಯಾವನೊಬ್ಬ ಗಂಡುಸು ಮತ್ತೊಬ್ಬನ ಕಾಲನ್ನೇ ತುಳಿಯಲಿ, ಅಥವಾ ಜೋಲಿ ಹೋಗಿ ಮೈಮೇಲೆಯೇ ಬೀಳಲಿ, ಅವನ ಒಂದು ನೀರವ ನಮಸ್ಕಾರದಿಂದ ಎಲ್ಲವೂ ಶಾಂತವಾಗುವುದು. ಒಂದು ಮನೆಯಲ್ಲಿ ಇಬ್ಬರು ರಕ್ತಸಂಬಂಧದ ಪರಮಾಪ್ತ ಸ್ತ್ರೀಯರಿದ್ದರೆ, ಅವರ ಜಗಳದ ಹುಯ್ಲಿಗೆ ಮನೆ ಮುಂದಿನ ಗಿಡದಲ್ಲಿಯ ಕಾಗೆಗಳಿಗೂ

ಗೂಡಿನಲ್ಲಿ ನಿಲ್ಲಲಾರದಂತೆ ಆಗುತ್ತದೆ. ಅದೇ, ಒಂದು ವಸತಿಗೃಹದಲ್ಲಿ ಸಂಬಂಧವಿಲ್ಲದ ಅನೇಕ ಪುರುಷರು ಪರಸ್ಪರ ಸದ್ಭಾವದಿಂದ ಹೊಂದಿಕೊಂಡಿರುವುದನ್ನು ಕಾಣಬಹುದು. ಇಂತಹ ಒಳ್ಳೆಯ ಮನುಷ್ಯರು, ಸದ್ಭಾವದಿಂದ ಕೂಡಿರುವವರು, ನಡುವೆ ಒಬ್ಬ ಹೆಂಗುಸು ಹೋಗಿ ಸೇರಿದರೆ—ಆ ಸೊಗಸು ಉಳಿಯುವುದಿಲ್ಲ– ಅಣ್ಣತಮ್ಮಂದಿರೊಡನೆಯೂ ಸದ್ಭಾವದಿಂದ ನಡೆಯಲಾರರು. ಮನಸುಗಳನ್ನು ಮುರಿಯುವುದರಲ್ಲಿ, ಮನೆಯನ್ನು ಒಡೆಯುವುದರಲ್ಲಿ ಹೆಂಗುಸರು ನಿಜವಾಗಿಯೂ ಪಟುಗಳು; ಗಂಡುಸರು ಹಾಗಲ್ಲ. ಈ ವಿಷಯದಲ್ಲಿ ರಮಣಿಯರ ಖ್ಯಾತಿ ಜಗಜ್ಜಾಹೀರಾಗಿದೆ, ಹೆಂಗುಸರು ಸ್ವಜಾತಿಯನ್ನಂತೂ ಒಳ್ಳೆಯ ಕಣ್ಣಿಂದ ನೋಡುವುದಿಲ್ಲ; ಗಂಡುಸರನ್ನಾದರೂ ತುಂಬ ಆದರದಿಂದ ನೋಡುತ್ತಾರೆಂಬಂತೆಯೂ ಇಲ್ಲ. ಏನೋ ಇದ್ದರೆ ದಯೆ, ಅದು ಅವರ ಮೇಲೆ ಅನುಗ್ರಹ; ಕಂಗಾಲರಿಗೆ ತಿರಸ್ಕಾರದಿಂದ ದಾನ ಮಾಡಿದಂತೆ. ಇದರಲ್ಲಿ ನಮಗೆ ಲಾಭವೇನೋ ಇದೆ—ಗಂಡುಸರು ತಿರುಕರಂತೆ ನಮ್ಮೆದುರು ಯಾವಾಗಲೂ ತಲೆ ತಗ್ಗಿಸಿಕೊಂಡು ಕಾಯುವರು—ಆದರೆ ನಮಗಿದು ಗೌರವದ ಮಾತಲ್ಲ.

ಅವರು ಅತೃಪ್ತರೆಂದೇ ನಮ್ಮದೇ ಮಾತು, ನಮ್ಮದೇ ಚಿಂತೆ ಅವರ ಬಾಳಿನ ಬಂಡವಾಳ ನಮ್ಮನ್ನು ಒಂದಿಷ್ಟು ನೋಡುವುದು, ನಮ್ಮ ನಾಲ್ಕು ಸವಿಮಾತುಗಳನ್ನು ಕೇಳುವುದು ಅವರಿಗೆ ಪರಮಲಾಭವೆಂದೆನಿಸುವುದು ಇಬ್ಬರು ಮಾತಾಳಿ ಗಂಡುಸರು ಸೇರಿದರೆಂದರೆ, ಅವರ ಮಾತಿನ ವಿಷಯ ನಾವೇ. ಮನುಷ್ಯಮಾತ್ರರ ಜೀವನದಲ್ಲಿ ಗುಪ್ತವಾಗಿಡತಕ್ಕ ಅಂಶ ಕೆಲವೊಂದಿರುತ್ತದೆ ಎಂಬ ಸಾಮಾನ್ಯಜ್ಞಾನವೂ ಆ ಹುಂಬ ಹುಚ್ಚರಿಗಿರುವುದಿಲ್ಲ ರವಿಬಾಬು "ತಿಳಿಗೇಡಿಗಳಾದ ನಮಗೆ ಮಾತನಾಡುವುದೇ ಗೊತ್ತಿಲ್ಲ, ಏನಾದರೂ ಆಡಹೋಗಿ ಏನಾದರೂ ಆಡಿಬಿಡುತ್ತೇವೆ" ಎಂದಿದ್ದಾರೆ. ಇದರಲ್ಲಿ ಅತಿಶಯೋಕ್ತಿ ಎಷ್ಟುಮಾತ್ರವೂ ಇಲ್ಲ, ಹದಿನಾರಾಣೆ ವಾಸ್ತವ. ಅವರ ವ್ಯವಹಾರವನ್ನು ಕಂಡು ನಾಚಿಕೆಯೂ ನಾಚಿ ಓಡಿದೆ ಆದರೆ ನನಗೆ ನಾಚಿಕೆ ಸಾವಾಗುತ್ತದೆ. ಅವರು ನಿಲ್ದಾಣದಲ್ಲಿ ತಿಕೇಟುಕೊಳ್ಳಲು ಬಂದು ಹಾಂ, ಎಂದು ಕಿಂಡಿಯಲ್ಲಿ ನೋಡುತ್ತ ನಿಂತುಬಿಡುವರು; ಉಗಿಬಂಡಿ ಹೊರಟುಹೋದೀತು, ಕಳ್ಳರು ಕಿಸೆ ಕತ್ತರಿಸಿಯಾರು ಎಂಬ ಅರಿವೂ ಅವರಿಗಿರುವುದಿಲ್ಲ. ಎಷ್ಟೋ ಬಾಬುಗಳು

ನೋಟನ್ನು ಕೊಟ್ಟು, ನನ್ನ ಕೈಯಿಂದ ತಿಕೀಟನ್ನು ಈಸಿಕೊಂಡು, ಉಳಿದ ರೊಕ್ಕವನ್ನು ತೆಗೆದುಕೊಳ್ಳಲು ಮರೆತು ಹಾಗೇ ಹೊರಟುದೂ ಉಂಟು. ಇದ ರಿಂದ ಅವರ ಬಗ್ಗೆ ನಮಗೆ ತಿರಸ್ಕಾರವೇ ಎನಿಸುವುದೆಂಬುದು ಆ ಬುದ್ಧಿಗೇಡಿ ಗಳಿಗೆ ತಿಳಿಯದು.

ಪುರುಷರಲ್ಲಿ ಇನ್ನೂ ಒಂದು ತಮಾಷೆಯನ್ನು ಕಂಡೆ ನಮಗಾಗಿ ಯಾವ ಕೀಳು-ಕಿರುಕುಳ ಕೆಲಸವನ್ನು ಮಾಡುವುದಕ್ಕೂ ಅವರು ಆತುರ ರಾಗಿರುವರು. ಎಂದಾದರೂ ನನ್ನೊಡನೆ ವಸ್ತು-ಒಡವೆಗಳಿದ್ದರೆ ಟ್ರಾಮಿ ನಿಂದಿಳಿಯುವಾಗ ಕಡಿಮೆಯೆಂದರೆ ನಾಲ್ಕು ಕೈಗಳಾದರೂ ಅದನ್ನು ಹಿಡಿದು ಕೊಳ್ಳಲು ಮುಂದೆ ಬರುತ್ತವೆ ಅವರಲ್ಲಿ ಯಾವ ಭಾಗ್ಯವಂತನಿಗೆ ನನ್ನ ಸೇವೆ ಲಭಿಸುವುದೊ, ಅವನ ಮುಖದಲ್ಲಿಯ ಆಗಿನ ಕೃತಾರ್ಥತೆಯ ಭಾವ, ಇಕ್ಕವ ರೆಲ್ಲರೂ ಅವನ ಕಡೆ ನೋಡುವ ಪ್ರಶಂಸಾ ಸೂಚಕವಾದ—ಆದರೂ ಈರ್ಷ್ಯಾ ಕುಲವಾದ ಅಭಿನಂದನೆಯ—ನೋಟ, ಖಂಡಿತ ನೋಡುವಂತಹದು.

ಹೀಗೆಯೆ ಒಬ್ಬ ಮನುಷ್ಯ ತನ್ನ ಸಹಪ್ರವಾಸಿಗಳ ಈರ್ಷೆಗೆ ಈಡಾಗಿ ದ್ದಾನೆ.

ಈ ಈರ್ಷೆ ಪುರುಷಸ್ವಭಾವದಲ್ಲಿಯ ಒಂದು ಚಿರಂತನವಾದ ವಿಶೇಷ. ಪಶುಜಗತ್ತು ಮೊದಲಾಗಿ ಮನುಷ್ಯ ಜಗತ್ತಿನವರೆಗೆ ಎಲ್ಲೆಲ್ಲಿಯೂ, ರಮಣಿಯ ಕರುಣೆಯನ್ನು ಪಡೆದವನೊಂದಿಗೆ ಅವರಿವರೆಲ್ಲರೂ ವ್ಯರ್ಥವಾಗಿ ಒಟ್ಟುಗೂಡಿ ಬೆನ್ನು ಹತ್ತುವುದು ಸಾಮಾನ್ಯವಾಗಿದೆ. ಒಬ್ಬನ ಹೊರತು ಉಳಿದವರೆಲ್ಲರೂ ನಿರಾಶರಾಗಬೇಕಾಗುವುದೆಂಬುದು ಕೂಡ ಆ ಎಬ್ಬಂಕಗಳಿಗೆ ತಿಳಿಯುವುದಿಲ್ಲ. ಒಂದು ಪ್ರಿಯ ವಸ್ತು ಪ್ರೀತಿಪಾತ್ರನಿಗೆ ದೊರಕದೆ ಮತ್ತೊಬ್ಬನಿಗೆ ಸಿಕ್ಕರೂ ಲಾಭ ಆವನಿಗೊಬ್ಬನಿಗೇ ಇಂದುಮತಿಯ ಸ್ವಯಂವರದಲ್ಲಿ ಪಾಪ, ಅಜ ಅವಳ ಮನಸಿಗೆ ಬಂದನೆಂದು ಸಮಸ್ತರಾಜರೂ ಕೋಪಗೊಂಡು ಆರ್ಭಟಿಸಿ ಎಂ ಹೋದರಂತೆ. ಅದೇಕಪ್ಪಾ ಇದು? ಪಾಪ, ಅವನ ತಪ್ಪೆ? ಅವನೊಂದು ವೇಳೆ ಶ್ರೀಕೃಷ್ಣನು ರುಕ್ಮಿಣಿಯನ್ನು, ಅರ್ಜುನನು ಸುಭದ್ರೆಯನ್ನು ಹರಣ ಮಾಡಿದಂತೆ ಕನ್ಯೆಯನ್ನು ಓಡಿಸಿಕೊಂಡು ಹೋಗಿದ್ದರೆ, ಅವರೆಲ್ಲಾ ಬೇಕಾ ದರೆ ಬೊಬ್ಬೆ ಕುಟ್ಟಬೇಕಿತ್ತು—ಅಜನು ಅನ್ಯಾಯ ಮಾಡಿದ, ಇಂದುಮತಿಗೆ ವರಿಸಲು ಅವಕಾಶವನ್ನೇ ಕೊಡಲಿಲ್ಲ, ಅವಳ ಶ್ರೀಹಸ್ತದ ವರಮಾಲೆ ನನ್ನ

ಕೊರಳಿಗೇ ಬೀಳಬಹುದಿತ್ತು !....ಇತ್ಯಾದಿ. ಆದರೆ ಇಂದುಮತಿಯಂತೂ ಹಾಗವರು ಉರಿದೇಳುವುದಕ್ಕೆ ಅವಕಾಶವನ್ನೇ ಇಟ್ಟಿರಲಿಲ್ಲ.

ಎಂತಹ ಮಹಾಮೂರ್ಖರಿವರು ? ಅಪೇಕ್ಷಿತ ರಮಣಿಯ ಪ್ರೀತಿ ಅನ್ಯನಲ್ಲಿ ಉಂಟಾದೀತೆಂದು ಅವನನ್ನು ಆ ಪ್ರೀತಿಯಿಂದ ದೂರವಿರಿಸಲು ಹವಣಿಸುತ್ತಾರೆ. ಅವನ ಕಷ್ಟವನ್ನು ಕಂಡು ಕನಿಕರವೆನಿಸಿ, ಅವನ ವಿಷಯದಲ್ಲಿ ಅಸಂಭವನೀಯವಾಗಿದ್ದ ಪ್ರೇಮವೂ ಸಂಭವಿಸಬಹುದೆಂಬುದು ಕೂಡ ಅವರಿಗೆ ತಿಳಿಯುವುದಿಲ್ಲ ಅವನನ್ನು ದೂರವಿರಿಸಲು ಹೋಗಿ ಮತ್ತಷ್ಟು ತಮ್ಮ ಪ್ರಿಯ ವಸ್ತುವಿನ ಹತ್ತಿರ ಒಯ್ದು ಬಿಡುವರು.

ಹೀಗೆಯೆ ಮಾಡಿ ಅವರು ಒಬ್ಬನಲ್ಲಿ ನನ್ನನ್ನು ಅನುರಕ್ತಳನ್ನಾಗಿ ಮಾಡಿದ್ದಾರೆ. ಈ ಅನುರಾಗವೆಂದರೆ ನೋವಿಗೀಡಾದವರಲ್ಲಿ ಸಹೃದಯರು ತೋರುವ ಕರುಣೆಯೆ ಹೊರತು ಬೇರೆಯಲ್ಲ. ಪ್ರೇಮವೆಂದು ತಪ್ಪಾಗಿ ಭಾವಿಸಲಾಗದು.

ಅವನು ನನ್ನ ಟ್ರಾಮಿನ ಸಹಪ್ರವಾಸಿ. ಬಹುಶಃ ದಿನಾಲು ಟ್ರಾಮಿನಲ್ಲಿ ಆತನ ಭೆಟ್ಟಿಯಾಗುವುದು. ಆಕಸ್ಮಾತ್ ಒಂದು ದಿನ ಇಬ್ಬರಲ್ಲಿಯೂ ಘನಿಷ್ಟತೆಯುಂಟಾಗುವ ಸಂದರ್ಭವೊದಗಿತು ಅಂದು ಆಫೀಸಿಗೆ ಹೋಗುವುದಕ್ಕೆ ನನಗೆ ಬಹಳ ವಿಲಂಬವಾಗಿಬಿಟ್ಟಿತ್ತು. ನಾನು ಟ್ರಾಮ್ ನಿಲ್ದಾಣದಲ್ಲಿ ಹೋಗಿ ನಿಲ್ಲುವಾಗಲೇ ಆಫೀಸಿನಲ್ಲಿರಬೇಕಾದ ಹೊತ್ತು ಟ್ರಾಮುಗಳೆಲ್ಲ ಜನರನ್ನು ಬಿಗಿದು ತುಂಬಿಕೊಂಡೇ ಬರುತ್ತಿದ್ದವು. ಮೆಟ್ಟಿಮಣೆಯ ಮೇಲೂ ಜನ ನಿಂತು ಹೊಯ್ದಾಡುತ್ತಿದ್ದರು. ಅವರಂತೆ ಮರದಲ್ಲಿ ನೇತಾಡುವ ಅಭ್ಯಾಸ ನಮಗಿಲ್ಲ. ಪುರುಷರು ಮಾತ್ರ ತಮ್ಮ ನೊವಲಿಗರ ಕುರುಹನ್ನು—ಗಡ್ಡ ಮೀಸೆಗಳೊಂದಿಗೆ—ಕಾಯ್ದಿರಿಸಿಕೊಂಡಿರುವರು. ಅಂತಹ ಮರ ಕಸರತ್ತು ನಮಗೆ ಸಾಧ್ಯವಿಲ್ಲ; ಸಾಧ್ಯವಿದ್ದರೂ ಲಜ್ಜೆಯೆಂಬ ಮನುಷ್ಯಧರ್ಮ ನಮ್ಮಲ್ಲಿ ಪರಿಪೂರ್ಣ ಪ್ರಮಾಣದಲ್ಲಿದೆ. ಬಹಳ ಹೊತ್ತು ಕಾಯ್ದೆ. ಆಗೊಂದು ಟ್ರಾಮಿನಲ್ಲಿ ಯಾರೂ ನೇತಾಡುವವರಿಲ್ಲದುದನ್ನು ಕಂಡು ಒತ್ತಟ್ಟಿಗೆ ಹತ್ತಿದೆ. ಆಸನವೊಂದೂ ತೆರವಿರಲಿಲ್ಲ ಗಂಡುಸರು ಹೆಂಗುಸರ ಸೇವೆಗಾಗಿ ಅತ್ಯಂತ ಕಾತರರಾದವರು, ಅವರಲ್ಲಿ ಯಾರಾದರೂ ನನಗೆ ಎಡೆಮಾಡಿ ಕೊಡುವರೆಂದು ನನ್ನ ಎಣಿಕೆಯಿದ್ದಿತು. ಆದರೆ ಒಬ್ಬನೂ ಒಂದಿಷ್ಟೂ ಸರಿಯಲಿಲ್ಲ.

ನಾನು ಒಳ್ಳೇ ಗೊಂದಲದಲ್ಲಿ ಬಿದ್ದೆ. ಏನು ಮಾಡಬೇಕೆಂದು ನನಗೆ

ಯೋಚನೆಗಿಟ್ಟುಕೊಂಡಿತು ಎರಡು ಕಂಪಾರ್ಟ್‌ಮೆಂಟುಗಳಾಚೆಯಿಂದ, ಒಬ್ಬ ತರುಣನೆದ್ದು ನಿಂತು ಕೂಗಿ ಹೇಳಿದ: "ನೀವು ಇಲ್ಲಿ ಕುಳಿತುಕೊಳ್ಳಿರಿ, ನಾನು ನಿಲ್ಲುತ್ತೇನೆ."

ಆ ಮಾತಿನಿಂದ ನನ್ನ ಮನಸಿಗೆಷ್ಟು ಆರಾಮವೆನಿಸಿತೆಂಬುದನ್ನು ಹೇಳುವುದು ಶಕ್ಯವಿಲ್ಲ. ಅವನು ಗಂಟೆಯನ್ನು ಬಾರಿಸಿ, ಟ್ರಾಮನ್ನು ತರುಬಿಸಿ, ನನ್ನನ್ನು ಕರೆದೊಯ್ದು ತನ್ನ ಸ್ಥಳದಲ್ಲಿ ಕುಳ್ಳಿರಿಸಿದ; ತಾನು ಗಾಡಿಯ ಹಿಂದೆ ಹೋಗಿ ನಿಂತುಕೊಂಡ. ಬಂಡಿ ತುಂಬ ಜನರನ್ನೆಲ್ಲ ತಾನು ಗೆದ್ದವನೆಂಬ ಆನಂದದ ಕಳೆ ಆತನ ಮೊಗದಲ್ಲಿ ಹೊರಸೂಸುತ್ತಿತ್ತು. ಎಲ್ಲರೂ ಅವನ ಕಡೆ 'ಹೇ, ದೊಡ್ಡ ಜಯ ಹೊಡೆದ!' ಎಂದು ಹೇಳುವಂತೆ ನೋಡಿದರು. ಈ ಗೆಲವನ್ನು ತಾವು ಯಾರೂ ಪಡೆಯಬಹುದಿತ್ತು. ಆದರೆ ಸಂಯೋಗ ಸಿಕ್ಕರೆ ಜಂಡಿಕೆಯನ್ನೇ ಹಿಡಿಯಬೇಕೆಂದು ನೋಡುವವರ ಕೈಯಿಂದ ಸಂಯೋಗ ನುಸುಳಿಕೊಂಡೇ ಹೋಗುವುದು; ಬುದ್ಧಿವಂತನಾದವನು ಸುಯೋಗದ ಮುಂಜುಟ್ಟನ್ನೇ ಹಿಡಿದೆಳೆದು ಅದನ್ನು ವಶಪಡಿಸಿಕೊಳ್ಳುವನು. ಈ ದೇಶ ಬರೀ ಹಿಂದೆ ನೋಡುತ್ತ ನೋಡುತ್ತ ಜಿಂಡಿಕೆಯಲ್ಲಿ ಮಮತೆಯಿಟ್ಟೇ ಹೋಯಿತು!

ಈಗ ನಾನು ಟ್ರಾಮು ಹತ್ತುವಾಗ ಎಲ್ಲ ಕಡೆಗೂ ನೋಡುವೆ– ಅವ ನಿದ್ದಾನೆಯೋ ಎಂದು. ಅವನಿದ್ದರೆ, ಹತ್ತಿ ಅವನ ಕಂಪಾರ್ಟ್‌ಮೆಂಟಿಗೇ ಹೋಗುವೆ—ಯಾರು ಸ್ಥಳ ಕೊಡದಿದ್ದರೂ ಅವನು ಕೊಟ್ಟೇ ಕೊಡುತ್ತಾನೆ ಎಂಬ ಭರವಸೆಯಿಂದ ಅಷ್ಟೆ. ನಾನು ದಿನಾಲು ಅವನು ಇರುವ ಕಡೆಗೇ ಬೇಕೆಂದು ಹೋಗುತ್ತಿರುವುದು ಅವನಿಗೆ ಗೊತ್ತಾಗಿರಬೇಕು. ನಾನು ಹತ್ತಿರ ಹೋಗುತ್ತಲೂ ಮುಗುಳುನಗೆ ನಕ್ಕು, ಧೀ-ಶ್ರೀ ಜ್ಯೋತಿಮಯವಾದ ಕಣ್ಣುಗಳನ್ನು—ಆರತಿಯ ಜೋಡು ದೀವಿಗೆಗಳಂತೆ—ನನ್ನ ಕಡೆ ಒಂದು ಸಲ ಎತ್ತಿ ಬೆಳಗಿ, ಮರುಚಣದಲ್ಲಿ ತನ್ನ ಕೈಯೊಳಗಿನ ಪುಸ್ತಕಗಳ ಮೇಲೆ ಇಳಿಸಿಬಿಡುವನು. ಅದರಲ್ಲಿ ನಿಜವಾದ ಪುರುಷನ ಪರಿಚಯವನ್ನು ಪಡೆದು ನಾನೂ ನನ್ನ ನೋಟದಲ್ಲಿ ಕೃತಜ್ಞತೆಯನ್ನು ಒಡಮೂಡಿಸುವೆ.

ವಿಲಕ್ಷಣ ಮನೋರಂಜಕವಾದ ಅವನ ಬಳಗವೊಂದಿದೆ. ಅವರು ಮಾತಿನಲ್ಲಿ ಜಗತ್ಸಂಸಾರದಲ್ಲಿಯ ಯಾವ ವಿಷಯವನ್ನೂ ಕಡೆಗಣಿಸಿಬಿಡುವ

ದಿಲ್ಲ—ಎಲ್ಲವನ್ನೂ ತಮ್ಮ ಬುದ್ಧಿಯ ಒರೆಗಲ್ಲಿಗೆ ತಿಕ್ಕುವವರೇ. ಇವರು ಬಹುಶಃ ಸಾಹಿತ್ಯಿಕರು—ಏಕೆಂದರೆ, ಅವರ ಮಾತಿನಲ್ಲಿ ಸಾಹಿತ್ಯದ ವಿಚಾರವೇ ಹೆಚ್ಚಾಗಿ ಹರಿಯುತ್ತದೆ. ಅವರಲ್ಲಿ ಒಬ್ಬ ಕವಿ. ಅವನಿಗೆ ಪ್ರಪಂಚದಲ್ಲಿ ಮೂರು-ನಾಲ್ಕು ಜನರ ಹೊರತು ಯಾರು ಬರೆದುದೂ ಅಷ್ಟೊಂದು ಸೇರುವುದಿಲ್ಲ. ತನ್ನ ಎನಿಸಿಕೆಯ ವಿಷಯದಲ್ಲಿ ಅವನೊಳ್ಳೇ ಜುಮ್ಮೆನ್ನದ ಹಟಮಾರಿ ಗೆಳೆಯರ ನೂರು ಯುಕ್ತಿಗಳಿಂದಲೂ ಅವನ ಅಭಿಪ್ರಾಯ ಚಲಿಸಲಾರದು. ಅವರೆಲ್ಲರೂ ಸ್ತ್ರೀಸ್ವಾತಂತ್ರ್ಯದ ಪಕ್ಷಪಾತಿಗಳು; ಕವಿಯ ಮತ ಮಾತ್ರ ಅದ್ಭುತವಾದುದು. ಆತ ಹೇಳುತ್ತಾನೆ, ಸುಂದರಿಯರಾದ ಲತಾಂಗಿಯರು ಮಾತ್ರ ಹೊರಹೊರಡಬೇಕು; ಗಡುತರ ಮೈಯವರು, ಕಪ್ಪುಬಣ್ಣದ ಕುರೂಪಿಗಳು ಸೆರೆಯಲ್ಲಿರುವುದೇ ಲೇಸು. ಇದನ್ನು ಕೇಳಿ, 'ಚೆಲುವಿಕೆ ನಿಸರ್ಗದ ಅಭಿಮಾನಧನ' ಎಂಬ ವಿಲ್ಬನನ ಉಕ್ತಿ ನೆನಪಾಗುತ್ತದೆ. ಅದನ್ನುಳ್ಳವರು ಅಡಗಿಕೊಂಡು ಕುಳ್ಳಿರಲಾಗದು; ಮೊಗಕ್ಕೆ ಮುಸುಕಿಟ್ಟುಕೊಳ್ಳುವವರು ಕುರೂಪಿಗಳೇ. ಆದರೆ ಹೀಗೆ ಮಾತನಾಡುವವನು ಅಪರೂಪ ಸುಂದರನೆಂದು ನನಗೆ ಎನಿಸುವುದಿಲ್ಲ. ಅವನು ಕವಿಯಿರಬೇಕು—ಸೌಂದರ್ಯೋಪಾಸಕನು ಕವಿಯಲ್ಲದೇನು?—ಎಂದು ನಾನು ತಿಳಿದುಕೊಂಡೆ. ಆದರೆ ಚೆಲುವು ಬರೀ ಕಣ್ಣಿಗೆ ಹಿಡಿಸುವ ವಸ್ತುವೆ? ರಮಣಿ ಹೂವಿನಂತೆ ರಮಣೀಯಳಾಗಿ ಇಲ್ಲದಿದ್ದ ಮಾತ್ರಕ್ಕೆ ಸುಂದರಿಯೆಂದೆನ್ನಲಾಗದೇನು? ಸ್ವಾಸ್ಥ್ಯವೇ ಸೌಂದರ್ಯವೆಂದು ಇಂಗ್ಲಿಷಿನಲ್ಲಿ ಒಂದು ನುಡಿಯಿದೆ. ಅಂತಹಳು ರೂಪಸಿಯಲ್ಲದಿರಬಹುದು, ಆದರೆ ಸುಂದರಿಯೆನಿಸಲು ಅದು ಆತಂಕಿಸಲಾರದು. ದೈವಯೋಗದಿಂದ ಕಂಗೊಳಿಸುವಂತಹ ಬಣ್ಣ ಮತ್ತು ರೂಪು ಇಲ್ಲದೆ ಇದ್ದ ಹೆಂಗುಸರಿಗೆ ಪ್ರಪಂಚವನ್ನು ನೋಡಿ ಅನುಭವಜ್ಞಾನಗಳ ಆನಂದವನ್ನು ಪಡೆಯುವ ಅಧಿಕಾರ—ಆಗತ್ಯ—ಇಲ್ಲವೇ ಇಲ್ಲವೆ? ಜಗತ್ತಿನೊಡನೆ ಸಂಪರ್ಕ-ಸಂಘರ್ಷಗಳುಂಟಾಗದೆ ಅವರು ಮನುಷ್ಯರಾಗುವುದು ಹೇಗೆ? ಮೈಮನಗಳ ನೆಮ್ಮದಿಯನ್ನು ಗಳಿಸಿಕೊಳ್ಳುವುದು ಎಲ್ಲಿಂದ?

ನನ್ನ ಮನದೊಳಗಿನ ಪ್ರಶ್ನೆಯನ್ನೇ ಒಬ್ಬ ಗೆಳೆಯ ಎತ್ತಿದ: "ಹಾಗಾದರೆ ನಾನು ನೀನು ಕೂಡ ಹೊರಬೀಳುವುದೂ ಉಚಿತವಲ್ಲ. ಹೆಂಗುಸರ ಬಗೆ

ನೀನು ಹೇಳುವ ಹಾಗೆಯೇ ಅವರೂ ಹೇಳಬಹುದು "ವರಾಹ-ವಾನರರಂತಹ ಪುರುಷರ ಮುಖವನ್ನು ನಾವು ನೋಡಲಾರೆವೆಂದು."

"ಅದೇಕೆ? ನಾವು ಗಂಡುಸರು ಯಾವಾಗಲೂ ಹೊರಗಿರತಕ್ಕವರು, ಹೊರಗೇ ಇರುವೆವು—ವಿಶೇಷತಃ, ನಾವು ಉಪಜೀವನಕ್ಕಾಗಿ ಗಳಿಸಬೇಕಾಗುವುದೆಂದ ಬಳಿಕ" ಇದು ಕವಿಯ ಯುಕ್ತಿವಾದ.

ಓ, ಎಂತಹ ಸಂತೋಷದ ವಾದ! ಗಳಿಕೆಯ ಕಾರಣವೇ ಇರುವುದಾದರೆ, ನಮ್ಮ ದೇಶದ ಮಧ್ಯಮ ಶ್ರೇಣಿಯ ಒಡಮನೆತನದ ಎಷ್ಟು ಜನ ಹೆಂಗುಸರು ಉಪವಾಸ ವನವಾಸ ಅನುಭವಿಸುತ್ತಿಲ್ಲ? ಅವರು ಬದುಕುವುದಕ್ಕಾಗಿ ಹೊರಬೀಳಬಾರದೇನು? ಬೇರೆ ಹೆಂಗುಸರೆಲ್ಲ ಹೊರಬೀಳುವುದಿಲ್ಲವೆಂದು, ನಾರೀ ಜಾತಿಯ ಸ್ವಾತಂತ್ರ್ಯ ದುಷ್ಟ ಪುರುಷರ ಕಣ್ಣಿಗೆ ಸಹನವಾಗುವುದಿಲ್ಲವೆಂದು ಅಳುಕಿ ಅಂಜಿ ಅವರು ಒಯಲಿಗೆ ಬರುವುದಿಲ್ಲ. ಗಂಡುಸರಿಗೆ ಸೇರುವುದಿಲ್ಲವೆಂದು ಪಂಜರದೊಳಗೇ ಉಪವಾಸ ಬಿದ್ದು ಸಾಯುವರಾಗಲಿ ಅವರು ಹೊರಬರುವುದಿಲ್ಲ. ಆ ಸ್ಥಿತಿ ತಡೆಯಲಾರದಂತಾಗಿ ಹೊರಬಿದ್ದರೆ ಸಂಪೂರ್ಣವಾಗಿ ಹೊರಬಿದ್ದೇ ಹೋಗುವರು. ಮನೆಗು ಹೆಣ್ಮಕ್ಕಳು ಬೀದಿಯಲ್ಲಿ ಅಲೆದಾಡಿದರೆ ನಮ್ಮ ದೇಶದ ಪುರುಷ ಪುಂಗವರ ತಲೆ ತಗ್ಗುವುದು. ಆದರೆ ತಾವೇ ಅತ್ಯಾಚಾರದಿಂದ ಅಬಲೆಯರನ್ನು ನಿಲ್ಲಗೊಡದೆ ಬೀದಿ ಪಾಲು ಮಾಡಿದರೆ ಪುರುಷರು ತಲೆಯನ್ನು ಒಳ್ಳೇ ಎತ್ತರಿಸಿಕೊಂಡು ಅಡ್ಡಾಡಬಹುದೇನೊ! ಈ ವಿಷಯವನ್ನು ಹಿಂದು ಮುಂದಿನ ಯೋಚನೆಯಿಲ್ಲದೆ ಬಾಯಿಂದಾಡುವುದಕ್ಕೂ ಇವರಿಗೆ ನಾಚಿಕೆ ಕೊಂಚವೂ ಇಲ್ಲ.

ಅವರಲ್ಲಿ ಈ ವಿಷಯವೇ ಹೆಚ್ಚಾಗಿ ಚರ್ಚೆಗೆ ಬರುವುದು. ನನ್ನ ಮಿತ್ರ—ಹೆಸರು ಗೊತ್ತಿಲ್ಲವೆಂದೇ ಮಿತ್ರ ಎನ್ನುತ್ತಿರುವುದು; ಇಂಥವನೆಂದು ಒಂದು ವ್ಯಕ್ತಿಯನ್ನು ತಿಳಿಸುವುದಕ್ಕಾಗಿ ಇದೊಂದು ಸಂಜ್ಞೆ ಮಾತ್ರ; ಅನ್ಯಥಾ ಭಾವಿಸಿಕೊಳ್ಳಬೇಡ—ಒಳ್ಳೇ ಸಿಡಿದೆದ್ದು ವಾದಿಸುವ: "ಹೆಂಗುಸರು ಹೊರಹೊರಡಬಾರದೆಂದರೆ ಮರುಭೂಮಿಯಲ್ಲಿ ಅದೆಷ್ಟು ಕಾಲ ತಿರುಗುವುದು?" ಅವನು ನನ್ನ ಬಗ್ಗೆ ಕೇಳಿ ತಿಳಿದವನಾಗಿದ್ದುದರಿಂದ, ನನ್ನೆದುರಿಗೆ ಹೀಗೆ ಮಾತನಾಡುತ್ತಾನೆಂಬುದನ್ನು ನಾನು ಬಲ್ಲೆ. ನಾನವನ ಮಟ್ಟಿಗೆ ಸ್ತ್ರೀಸ್ವಾತಂತ್ರ್ಯದ

ಮುಂದಾಳು. ಮಿತ್ರನ ಈ ಮಾತಿಗೆ, ಅವನ ಮಿತ್ರ ಸುಕುಮಾರ ತರುಣ ನೊಬ್ಬ ಒಂದು ದಿನ ನುಡಿದ: "ಜನರಿಗೆ ಹೇಳುವುದಕ್ಕೆ ನಮಗೆ ಅಧಿಕಾರವೇ ಇಲ್ಲ. ಸ್ತ್ರೀಸ್ವಾತಂತ್ರ್ಯದ ಬಗ್ಗೆ ನಾವು ಏನಾದರೂ ಮಾಡುತ್ತೇವೆಯೆ?" ನನ್ನ ಮಿತ್ರನೆಂದ: "ಈಗೇನು ಮಾಡಲಿಕ್ಕಾಗುತ್ತದೆ? ಮೊದಲು 'ಸ್ತ್ರೀ' ಬರಲಿ, ಎಂದರೆ ತಾನೇ ಸ್ತ್ರೀಸ್ವಾತಂತ್ರ್ಯ ಕೊಡುವುದು! ಮೊದಲು ಮದುವೆ ಯಾಗಲಿ, ಆಮೇಲೆ ನನ್ನ ದೃಷ್ಟಾಂತದಿಂದ ಇಪ್ಪತ್ತೈದು ವರ್ಷಗಳಲ್ಲಿ ಪಥ- ಘಾಟುಗಳೆಲ್ಲ ಸುಂದರಿಯರಿಂದ ಮುಚ್ಚಿ ಹೋಗುವವು, ನೋಡುವೆಯಂತೆ." ಮಿತ್ರನ ಮದುವೆಯಾಗಿಲ್ಲವೆಂದು ಗೊತ್ತಾದಂತಾಯಿತು. ಸುಕುಮಾರ ಯುವಕನೆಂದ: "ಅಲ್ಲವೋ, ಇಪ್ಪತ್ತು ವರ್ಷಗಳ ತರುವಾಯ ಕಣ್ಣುಗಳೇ ಮಧ್ಯಮವಾದ ಮೇಲೆ ಪಥಘಾಟುಗಳು ಸುಂದರಿಯರಿಂದ ಮುಚ್ಚಿದರೆ ನಮ ಗೇನು?" ಆಗ ಕೆಲಸವನ್ನು ಬೇಗನೆ ಮುಂದುವರಿಸುವ ಬಗ್ಗೆ ಯೋಚನೆ ನಡೆಯಿತು. "ಬನ್ನಿ, ಒಂದು ಕೆಲಸ ಮಾಡುವಾ. ರವಿಬಾಬುಗಳ 'ನಾವು ಮತ್ತು ನೀವು' ಎಂಬ ಹಾಡನ್ನು ಹಾಡುತ್ತ ನಗರ ಸಂಕೀರ್ತನೆ ತೆಗೆಯುವಾ. ಸುಂದರಿಯರ ಬಾಗಿಲು ಬಾಗಿಲಿಗೆ ಹೋಗಿ ಕರುಣ ಆರ್ತನಾದದಲ್ಲಿ ಹೇಳುವಾ:

'ತೋಮರಾ ಕೋಥಾಯ ಆಮರಾ ಕೋಥಾಯ ಆಛಿ,
ಕೋನೋ ಸುಲಗನೇ ಹಬ ನಾಕಿ ಕಾಛಾಕಾಛಿ!'.

(ನೀವು ಎಲ್ಲೋ ನಾವು ಎಲ್ಲೋ ಇರುವೆವು, ಯಾವ ಸುಲಗ್ನದಲ್ಲಿಯೋ ಹತ್ತಿರಹತ್ತಿರವಾಗುವೆವು). ಹೆಣ್ಮಕ್ಕಳನ್ನೊಮ್ಮೆ ವಿದ್ರೋಹಿಗಳನ್ನಾಗಿ ಮಾಡಿ ಬಿಟ್ಟರೆ, ಒಂದೇ ಒಂದು ದಿನದಲ್ಲಿ ಅಡೆತಡೆಗಳನ್ನೆಲ್ಲ ಮುರಿದು ಚೂರು ಚೂರು ಮಾಡಬಹುದು." ಎಂದ ಆ ಸುಕುಮಾರ ತರುಣ. "ಬಂಡು ಹೂಡುವರೆ ಹೆಂಗುಸರು? ಗಂಡುಸರಿಗೇ ಇಷ್ಟೊಂದು ಸ್ವಾತಂತ್ರ್ಯದ ಆಕಾಂಕ್ಷೆಯಿರು ವಾಗ ಹೆಂಗುಸರ ಮಾತು!" ಎಂದ ಮಿತ್ರ.

ಗಂಡುಸರಿಗಿಂತ ಹೆಂಗುಸರು ಕೀಳೆಂಬ ಈ ಮಾತಿನ ಭಾವ ನನ್ನ ಮನ ವನ್ನು ಮೂದಲಿಸಿ ನೋಯಿಸಿತು. ಇದಕ್ಕೆ ನಾವೇ ಬಹುಮಟ್ಟಿಗೆ ಹೊಣೆ ಗಾರರು. ಪುರುಷರಿಗೆ ಸಮಭುಜರಾಗಲು ನಾವೇನು ಪ್ರಯತ್ನ ಮಾಡಿದ್ದೇವೆ? ನಮ್ಮ ಅಧಿಕಾರವನ್ನು ನಾವು ಪಡೆದುಕೊಳ್ಳಬೇಕೆಂಬ ಅರಿವು ನಮಗಿದೆಯೆ? ನಾವು ಅಬಲೆಯರು, ಪಂಜರದ ಹಕ್ಕಿಗಳು!

ನಮ್ಮ ತರುವಾಯ ಕಟ್ಟನ್ನು ಕಳಚಿ ಬಿಡುಗಡೆ ಹೊಂದಿ ಸ್ವತಂತ್ರ ರಾಗುವ ಹೆಂಗುಸರ ಸ್ಥಿತಿಯನ್ನು ನಾವು ಸುಗಮವಾಗಿ ನಿಷ್ಕಂಟಕವಾಗಿ ಮಾಡಿ ಹೋಗುವೆವು. ಆದರೆ ನಮ್ಮ ಸರ್ವಾಂಗದಲ್ಲಿ ಮಾತ್ರ ಮುಳ್ಳು ನಟ್ಟ ನೋವು ದಾರುಣಲಜ್ಜೆಯ ರಕ್ತಿಮೆಯ ರೂಪದಲ್ಲಿ ಹೊಮ್ಮುವುದು ಯಾವ ಗುರಿಯ ಹಾದಿಯಲ್ಲೇ ಆಗಲಿ ಅಗ್ರದೂತರಾಗುವವರ ಅದೃಷ್ಟವೇ ಹೀಗೆ; ಅದಕ್ಕಾಗಿ ದುಃಖಪಡುವ ಕಾರಣವಿಲ್ಲ

ಸದ್ಯ ಸಾಕು. ಕಾಗದ ತುಂಬ ದೊಡ್ಡದಾಯಿತು, ಅಂಚೆಯ ಸಮಯವೂ ಆಯಿತು. ಇತಿ— ನಿನ್ನ ಸ್ನೇಹಾಸಕ್ತ

ಲಾವಣ್ಯ.

೨

ತಂಗೀ ಲಾವಣ್ಯಾಮಯೀ,

ನಿನ್ನ ಮನೋರಂಜಕ ಪತ್ರವನ್ನೋದಿ ನಾನು ಹೊಟ್ಟೆ ತುಂಬ ನಕ್ಕೆ. ನಿಮ್ಮ ತಂದೆಯ ವಿಯೋಗದ ದುಃಖಾನುಭವಕ್ಕೆ ಹೊಟ್ಟೆಯಲ್ಲಿ ಎಡೆಯೆ ಸಿಕ್ಕ ಲಿಲ್ಲ. ನೀನು ರೇಖಿಸಿದ ಇಂತಹ ಮನೋರಂಜಕ ಪುರುಷ ಚಿತ್ರವನ್ನು ಅವರ ಕಣ್ಣಿಗೆ ಹಾಕದಿದ್ದರೆ ನನ್ನ ಮನಸಿಗೆ ತೃಪ್ತಿಯಾಗದು. ಅದನ್ನು ಪ್ರತಿ ಮಾಡಿ 'ಪ್ರವಾಸಿ'ಗೆ ಕಳಿಸಬೇಕೆಂದಿದ್ದೇನೆ—ನಿನ್ನ ಮಿತ್ರನ ಸಾಹಿತ್ಯಿಕರ ಗುಂಪು ಲೋಕದ ದೃಷ್ಟಿಯನ್ನು ಬದಲಿಸಲು ಹೊರಟಿದೆ; ಅವರೂ ತಮ್ಮ ದೃಷ್ಟಿ ಯನ್ನು ತಿದ್ದಿಕೊಳ್ಳುವುದು ಒಳ್ಳೆಯದೆಂದು ನನಗೆನಿಸುತ್ತದೆ.

ನೀನು ಅಬಲೆ. ಗಂಡುಸರ ಸಂತೆಯೊಳಗೆ ಬಾಳ ಹೋರಾಟ ನಡೆಸ್ಸು ವುದು ನಿನಗೆ ಒಗ್ಗುವುದೆ ? ಒಂದು ಕೆಲಸ ಮಾಡಲ್ಲ-ನಿನ್ನ ಮಿತ್ರನಿಗೆ ಶರಣಾ ಗತಳಾಗು. ನಿನಗೆ ಅವನೂ ಸರಿಬಂದಿದ್ದಾನೆ, ಅವನಿಗೆ ನೀನೂ ಸರಿಬಂದಿದ್ದೀ. ನಿಮ್ಮಿಬ್ಬರ ಮದುವೆಯೂ ಇನ್ನೂ ಆಗಬೇಕಾಗಿದೆ; ಬೇಕಾದರೆ ಆ ಶುಭ ಕಾರ್ಯ ನಿಮ್ಮಿಬ್ಬರಲ್ಲಿಯೇ ಜರುಗಬಹುದು. ಸ್ವಲ್ಪ ಧೈರ್ಯದಿಂದ ಆತ ನನ್ನು ಗುರುತು ಮಾಡಿಕೊಂಡುಬಿಡು. ಈಕೆ ಏನು ಹೇಳುತ್ತಾಳೆಯೋ ಎಂದೀ ಮತ್ತೆ—ನೋಡು, ನಿನ್ನ ಮಿತ್ರ ಬಹುಶಃ ಒಲ್ಲೆನ್ನುವುದಿಲ್ಲ. ಅದೇನೋ ಎನ್ನು ತ್ತಾರಲ್ಲ, 'ಉಣ್ಣುತ್ತೀಯಾ ?' ಎಂದು ಕಂಗಾಲಿಯನ್ನು ಕೇಳಿದರೆ 'ಎಲೆ ಎಲ್ಲಿ ಹಾಕಲಿ ?' ಎಂದನಂತೆ. ನಿನ್ನ ಮಿತ್ರ ಎಲೆ ಹಾಕಲು ಸಿದ್ಧನಾಗಿಯೇ

ಇದ್ದಾನೆ—ಉಣ್ಣುವೆಯೋ ಹೇಗೆಂದು ನೀನು ಕೇಳುವುದೇ ಸಾಕು. ಈ ಕಾಗದಕ್ಕೆ ಉತ್ತರವಾಗಿ ಶುಭವಾರ್ತೆಯನ್ನು ಕೇಳುವೆನೆಂದು ಹಾರಯಿಸಿದ್ದೇನೆ. ಇತಿ—

ನಿನ್ನ
ಲಲಿತಾ

೩

ಅಕ್ಕ ಲಲಿತಾ,

ನಿನ್ನ ಉಪದೇಶದ ಓಲೆ ಬರುವ ಮೊದಲೆ ದೈವವಶಾತ್ ನನ್ನ ಮಿತ್ರನೊಡನೆ ಪರಿಚಯವಾಗಿಬಿಟ್ಟಿತು. ಏನು ನಾಚಿಗೆಗೇಡಿ ಜನವಮ್ಮ, ಛಿ!

ಒಂದು ದಿನ ಆಫೀಸಿನಲ್ಲಿದ್ದ ನನ್ನ ಜೊತೆ ಕೆಲಸಗಾರರು, ಬೇರೊಬ್ಬ ಹೆಣ್ಣುಮಗಳು, ನಾನು ಮಾತನಾಡುತ್ತ ಕುಳಿತಿದ್ದೆವು. ಆಗ ಯಾರೋ ತಿಕೀಟುಕಿಂಡಿಯಲ್ಲಿ ಕೈಯಿಟ್ಟು "ಒಂದು ದಮುದಮುದ ತಿಕೀಟು ಕೊಡಿರಿ" ಎಂದರು. ಆ ಸ್ವರವನ್ನು ಕೇಳಿ ನಾನು ಚಕಿತಳಾಗಿ ಆಕಡೆ ನೋಡಿದೆ. ಕಿಡಿಕಿಯಲ್ಲಿ ಮುಖವಿಟ್ಟು ಅವನೇ ನಿಂತಿದ್ದ. ತುಟಿಗಳಲ್ಲಿ ತಿಳಿನಗೆ ಅರಳಿದ್ದಿತು. ನಾನು ಅತ್ತ ನೋಟವನ್ನು ಹೊರಳಿಸುತ್ತಲೂ ಅವನು ಸ್ವಲ್ಪವೂ ಸಂಕೋಚವಿಲ್ಲದೆ, ಕೂಡಿದ ಜನರಲ್ಲಿಯೇ ನನ್ನನ್ನು ಕೇಳಿಬಿಟ್ಟ: "ನೀವು ಇಲ್ಲಿ ಕೆಲಸ ಮಾಡುತ್ತೀರಾ?" ನೋಡಿದೆಯಾ ಅಕ್ಕ, ಎಂತಹ ದುಷ್ಟಬುದ್ಧಿ! ಬೇಕೆಂತಲೇ ನನ್ನನ್ನು ಗೊಂದಲದಲ್ಲಿ ನೂಕಬೇಕೆ? ನಾನು ತಿಕೀಟು ಕಚೇರಿಯಲ್ಲಿದ್ದುದನ್ನು ಕಣ್ಣಿನಲ್ಲಿ ನೋಡುತ್ತಿದ್ದಾನೆ—ಕೆಲಸಕ್ಕಿಲ್ಲದಿದ್ದರೆ ನಾನಲ್ಲಿಗೆ ಔತ್ತಣ ಹೊಡೆಯಲು ಹೋಗಿದ್ದೆನೆ? ಇದೂ ಒಂದು ಒಣ ಲೌಕಿಕದ ಮಾತೇ. ಎಣ್ಣೆ ಹಚ್ಚಿಕೊಂಡು ಘಾಟಿನಲ್ಲಿ ನಿಂತುದನ್ನು ಕಂಡೂ 'ಏನು ಸ್ನಾನಕ್ಕೆ ಬಂದಿರಾ?' ಎಂದು ಜನ ಕೇಳುತ್ತಾರೆ; ಸಂತೆಯಲ್ಲಿ ಪಲ್ಲೆಕಾಯಿ ಕೊಳ್ಳುತ್ತಿರುವುದನ್ನು ನೋಡಿಯೂ 'ಏನು ಪೇಟೆಗೆ ಬಂದಿದ್ದೀರಾ?' ಎಂದು ಪ್ರಶ್ನಿಸುತ್ತಾರೆ. ಸಂದೇಹವೇ ಇದ್ದರೆ ಕಣ್ಣಿಗೆ ಕನ್ನಡಕ ಇಟ್ಟುಕೊಂಡು ನೋಡಲಿ ಬೇಕಾದರೆ; ಅಥವಾ ಬುದ್ಧಿ ಬೆಳೆಯುವುದಕ್ಕಾಗಿ ವೈದ್ಯರ ಬ್ರಾಹ್ಮೀತೈಲವನ್ನು ತೊಡೆದು ತಿಕ್ಕಿಕೊಳ್ಳಲಿ. ಮೂರ್ಖರಂತೆ ಹೀಗೆ ಕೇಳುವುದೇನು? ಆತ 'ಇಲ್ಲಿ ಕೆಲಸ ಮಾಡುತ್ತೀರಾ?' ಎಂದು ಕೇಳಿದಾಗ, ನಿಜವಾಗಿ ಅಕ್ಕಾ, ನನಗೆ ಲಜ್ಜೆಯಿಂದ ತಲೆಯೆ ಹೋದಂತಾಯಿತು. ನಾನು ಈ ಸಾಮಾನ್ಯ ಕಾರ್ಯದಲ್ಲಿ ತೊಡಗಿ

ರುವುದನ್ನು ನಿತ್ಯ ಸಾವಿರ ಗಂಡುಸರು ನೋಡಿ ಹೋಗುತ್ತಾರೆ; ಆತ ಸಾವಿರ-ದೊಂದನೆಯವ. ಆತ ನೋಡಿದುದಕ್ಕೆ ನನಗೇಕೆ ಅಷ್ಟು ನಾಚಿಕೆಯಾಗಬೇಕೋ ತಿಳಿಯದು. ನಾನು ಓದುಬರೆಹ ಕಲಿತವಳು, ಹಾಡುವುದು ಬಾರಿಸುವುದನ್ನು ತಕ್ಕಮಟ್ಟಿಗೆ ಬಲ್ಲವಳು, ಜಗದ್ವ್ಯಾಪಾರಗಳ ಸ್ಥಿತಿ-ಗತಿಗಳೂ ನನಗೆ ತಿಳಿಯುತ್ತಿವೆ—ಎಂಬುದನ್ನು ಆತನಿಗೆ ತಿಳಿಸುವ ಅವಕಾಶ ನನಗೆ ಸಿಕ್ಕಲಿಲ್ಲ. ನಾಚಿಕೆಯಿಂದ ಮೈಮನ ಸಂಕುಚಿತವಾಗಿ, ಮುಖ ಕೆಂಪಾಗಿ, " ಹಾಂ " ಎಂದಿಷ್ಟು ಮಾತ್ರ ನನ್ನ ಬಾಯಿಂದ ಶಬ್ದ ಹೊರಟಿತು. ಇದೇ ನಮ್ಮ ಮೊದಲ ಮಾತು.

ಆಮೇಲೆ, ಅವನು ದಮುದಮಕ್ಕೆ ಹೋಗುವುದು ಹೆಚ್ಚಾಯಿತು. ದಮುದಮಕ್ಕೆ ಹೋಗುವುದು ಗೀಗುವುದು ಸುಳ್ಳೇ. ಟಿಕೀಟು ಕೊಳ್ಳಲು ಬಂದು ಅದೆಷ್ಟು ಸುಳ್ಳುಸುಳ್ಳೇ ಪ್ರಶ್ನೆಗಳನ್ನು ಕೇಳುವುದು, ಏನು ತಾನ, ಏನು ಕತೆ! ನಾಯಿಂಟೀನ್ ಡೌನ್ ಪ್ಯಾಸಿಂಜರ್ ಯಾವ ಪ್ಲಾಟ್‌ಫಾರ್ಮಿನಲ್ಲಿ ಬರುವುದು? ಸೆವನ್‌ಅಪ್ ಎಷ್ಟು ಹೊತ್ತಿಗೆ ಬಿಡುವುದು? ಬ್ಯಾರಾಕಪುರದ ರಿಟರ್ನ್ ಟಿಕೀಟಿನ ಬೆಲೆ ಎಷ್ಟು? ವೀಕ್-ಎಂಡ್ ಟಿಕೀಟಿನಲ್ಲಿ ಮಂಗಳವಾರ ತಿರುಗಿ ಬರಬಹುದೋ ಹೇಗೆ? ಹೀಗೆಯೇ ಎಲ್ಲಾ ಕೆಲಸಕ್ಕೆ ಬಾರದ ಪ್ರಶ್ನೆಗಳು. ಆದರೂ ಎಷ್ಟು ಜಾಣತನದ ಪ್ರಶ್ನೆಗಳವು? ಒಂದೇ ಶಬ್ದದಲ್ಲಿ ಉತ್ತರ ಹೇಳುವುದೇ ಸಾಧ್ಯವಿಲ್ಲ. ಹೇಳಿ ಹೇಳಿ ಸಾಯಬೇಕು ಹಾಗೇ. ಕೇಳಿದವನು ಹೇಳುವುದನ್ನಾದರೂ ಮನಸುಗೊಟ್ಟು ಕೇಳುವನೆನ್ನಬೇಕೆ? ಆ ಎಂದು ನನ್ನ ಮುಖವನ್ನೇ ನೋಡುತ್ತಿರುತ್ತಾನೆ. ಜನರು ನೋಡುತ್ತಿರುವರೆಂಬ ಕಡೆ ಲಕ್ಷ್ಯವೇ ಇಲ್ಲ. ಎಂತಹ ನಿರ್ಲಜ್ಜ ಮನುಷ್ಯ!

'ಪೂಜೆ'ಯ ಬಿಡುವಾಗಿದೆ. ಕೋರ್ಟು-ಕಚೇರಿ ಮುಚ್ಚಿವೆ. ಕಲಕತ್ತೆ ಛಣಛಣ ಸುರಿಯುತ್ತಿದೆ. ಎಲ್ಲರೂ ಬಿಡುವಿನ ಸೊಗಸನ್ನು ಸವಿಯುತ್ತಿದ್ದಾರೆ. ನಾನು ಮಾತ್ರ ದಿನಾಲು ಕೆಲಸಕ್ಕೆ ಹೋಗಿ ಬರಲೇ ಬೇಕು. ಈಗ ಆ ಮನುಷ್ಯನನ್ನು ಕಂಡಿಲ್ಲ. ಟ್ರಾಮಿನಲ್ಲಿಯೂ ಇಲ್ಲ; ದಮುದಮಕ್ಕೂ ಹೋಗುವುದಿಲ್ಲ. ಅವನ ಕಚೇರಿ ಮುಚ್ಚಿರಬಹುದು; ದಮುದಮ ಬೇರೆ ಮುಚ್ಚಿಲ್ಲವಲ್ಲ? ನಡುನಡುವೆ ಹೋಗಲಿಕ್ಕೆ ಬರಲಿಕ್ಕೆ ಯಾರು ಅಡ್ಡಿ ಮಾಡುತ್ತಾರೆ? ಅವರು ಗಂಡುಸರು ತಾನೆ?—ಹೊರಗೆ ತಿರುಗಾಡಿ ತಿರುಗಾಡಿ, ಬಿಡುವು ಸಿಕ್ಕರೆ ಸಾಕು,

ಮನೆಯಲ್ಲಿ ಒಂದು ಮೂಲೆ ಹಿಡಿದು ಬಿದ್ದಿರಬೇಕೆಂಬಷ್ಟು ಬೇಜಾರಾಗಿರಬೇಕು. ನಾವಾಗಿದ್ದರೆ ಬಿಡುವಿನ ದಿನದಲ್ಲಿಯೇ ಹೆಚ್ಚಾಗಿ ಅಲೆದಾಡುತ್ತಿದ್ದೆವು.

ಬಿಡುವಿನ ಕಾಲ, ಅದರಲ್ಲಿಯೂ ರವಿವಾರ; ಮೇಲೆ ಮಧ್ಯಾಹ್ನ. ಟ್ರಾಮಿನಲ್ಲಿ ಜನರೇ ಇರಲಿಲ್ಲ. ಒಂದು ಕಂಪಾರ್ಟ್‌ಮೆಂಟಿನಲ್ಲಿ ಒಬ್ಬನೇ ಒಬ್ಬ ಶ್ಯಾಮಸುಂದರ ಕುಳಿತಿದ್ದ. ನನ್ನನ್ನು ನೋಡಿ ಕೆನ್ನೆಯೊಳಗೇ ನಕ್ಕ. ಸರಿ, ಅದೇನು ನಗೆ, ಅಪರಿಚಿತಳಾದ ಒಬ್ಬ ಹೆಣ್ಮಗಳನ್ನು ನೋಡಿ?—ಅವನ ನಗೆಯನ್ನು ಕಂಡು ನನಗೂ ನಗೆಯನ್ನು ತಡೆಯುವುದಾಗಲಿಲ್ಲ. ಬಲು ಕೆಟ್ಟ ಮನುಷ್ಯನವ,—ಬೀದಿ ಬಯಲೆನ್ನದೆ ಸಿಕ್ಕಸಿಕ್ಕಲ್ಲಿ ಹೆಂಗುಸರನ್ನು ಹೀಗೆ ನಗಿಸುವುದು ಸರಿಯೆ? ನಾನು ಗೊಂದಲಗೆಟ್ಟೆ, ಏನು ಮಾಡುತ್ತಿದ್ದೇನೆಂಬ ಅರಿವೂ ಇಲ್ಲದೆ, ಇಡೀ ಬಂಡಿ ತೆರವಿದ್ದರೂ ಅವನ ಕಂಪಾರ್ಟ್‌ಮೆಂಟಿಗೇ ಹೋದೆ. ಹತ್ತಿ ಹೋದ ಮೇಲೆ ನನಗೆಚ್ಚರು ಬಂದಿತು. ಆ ಮನುಷ್ಯನ ಮೇಲೆ ಬಹಳ ಕೋಪವುಂಟಾಯಿತು. ಒಮ್ಮೆಲೆ ನನ್ನ ಮನವನ್ನು ಸ್ತಿಮಿತಕ್ಕೆ ತರುವುದು ಕಠಿನವಾಯಿತು. ನನಗೆ ಇಳಿದು ಹೋಗಲೂ ಆಗಲಿಲ್ಲ, ಕುಳಿತುಕೊಳ್ಳಲೂ ಆಗಲಿಲ್ಲ. ಬಿರಬಿರನೆ ಅವನ ಕಡೆ ನೋಡುತ್ತ ನಿಂತುಬಿಟ್ಟೆ. ಅವನು ದಿವ್ಯವಾಗಿ ಕುಳಿತುಕೊಂಡು ಮೆಲುನಗೆ ನಗುತ್ತಲಿದ್ದ. ಆಗಲೇ ಟ್ರಾಮು ಹೊರಟಿತು. ಆ ಆಘಾತದಿಂದ ಜೋಲಿ ಹೋಗಿ ನಾನು ಆ ಮನುಷ್ಯನ ಮೈಮೇಲೆ ಬಿದ್ದುಬಿಟ್ಟೆ. ಅವನು ಗಪ್ಪನೆ ನನ್ನನ್ನು ಹಿಡಿದ. ಕೂಡಲೆ ನಾನು ಅವನ ಎದುರಿನಲ್ಲಿಯೇ ದೊಪ್ಪನೆ ಕುಳಿತುಕೊಂಡೆ. ಆದರೂ ಅವನು ನನ್ನ ಕೈಯನ್ನೇನೂ ಬಿಡಲಿಲ್ಲ

"ಪೆಟ್ಟು ಹತ್ತಲಿಲ್ಲವಷ್ಟೆ?" ಕೈಯನ್ನು ಹಿಡಿದಿದ್ದಂತೆಯೇ ಪ್ರಶ್ನಿಸಿದ.

ಸಿಟ್ಟಿನಿಂದ ನನ್ನ ಮೈ ಉರಿಯತೊಡಗಿತು ನನಗೆ ಪೆಟ್ಟು ಹತ್ತಲೊಲ್ಲದೇಕೆ ಬಿಡಲೊಲ್ಲನೆ ಕೆ, ಇವನಿಗೇಕೆ ಅಷ್ಟು ತಲೆನೋವು? ಅವನ ಪ್ರಶ್ನೆಗೆ ಉತ್ತರವನ್ನೀಯದೆ ನಾನೆಂದೆ: "ತಮ್ಮ ಮೇಲೆ ಬಿದ್ದುಬಿಟ್ಟೆ, ಕ್ಷಮಿಸಿರಿ"

ಆಗ ಆ ನಿರ್ಲಜ್ಜ ಏನೆನ್ನಬೇಕು ಅದಕ್ಕೆ? "ಈ ಸೌಭಾಗ್ಯಕ್ಕಾಗಿ ತಮಗೆ ನಾನು ಕೃತಜ್ಞನಾಗಿದ್ದೇನೆ!"

ಮಿತಿಮೀರಿದ ಕೋಪದ ಆವೇಶದಿಂದ ನನ್ನ ಕೈ ಅವನ ಕೈಯೊಳಗಿದೆ

ಯೆಂಬ ಅರಿವೇ ಉಳಿದಿರಲಿಲ್ಲ. ಅವನಾದರೂ ಅದನ್ನು ನನ್ನ ಗಮನಕ್ಕೆ ತಂದುಕೊಡಬಾರದೆ ? ಅವನು ಹಾಗೆಯೆ ಮಾತನ್ನು ಮುಂದುವರಿಸಿದ: “ ನೋಡಿರಿ, ತಾವೂ ನನ್ನನ್ನು ಬಹಳ ದಿನಗಳಿಂದ ನೋಡುತ್ತಿದ್ದೀರಿ, ನಾನೂ ತಮ್ಮನ್ನು ನೋಡುತ್ತಿದ್ದೇನೆ. ಆದರೂ ನಮ್ಮಿಬ್ಬರಲ್ಲಿ ಪರಿಚಯವಾಗದಿರುವುದು ಸರಿಯೆ ? ನಾನು ತಮ್ಮ ಪರಿಚಯವನ್ನು ಬಹುಮಟ್ಟಿಗೆ ಸಂಗ್ರಹಿಸಿದ್ದೇನೆ. ತಮ್ಮ ಹೆಸರು ಲಾವಣ್ಯ, ರೂಪಕ್ಕೆ ತಕ್ಕ ಹೆಸರು; ರಾಮಮಣಿ ಎಂದರೆ ಎಷ್ಟೂ ಒಪ್ಪುವುದಿಲ್ಲ ಹರಿಶ ಪರಾಮಾಣಿಕ ಕೇರಿಯಲ್ಲಿಯ ತಮ್ಮ ಮನೆಯನ್ನು ಕೂಡ ನೋಡಿ ಬಂದಿದ್ದೇನೆ. ತಮ್ಮ ತಂಗಿ ಪುಷಿಗೆ, ತಮ್ಮನರೂಗೆ ತಿಂಡಿ ತಿನಿಸು ಕೊಟ್ಟು, ಅವರ ಗೆಳೆತನವನ್ನು ಕೂಡ ಗಳಿಸಿಕೊಂಡಿದ್ದೇನೆ. ಇನ್ನು ನನ್ನ ಪರಿಚಯವನ್ನು ತಾವು ಅಗತ್ಯವಾಗಿ ಮಾಡಿಕೊಳ್ಳಬೇಕು. ”

ಅವನ ಗುರುತನ್ನು ಅರಿತುಕೊಳ್ಳಲು ನನಗೆ ಆತುರವಿರಲಿಲ್ಲ. ನಾನು ಏನೂ ಮಾತನಾಡದೆ ಸುಮ್ಮಗಿದ್ದೆ. ಒಡಬಡಿಸಿ ಸತ್ತುಕೊಳ್ಳಲಿ, ಅದನ್ನು ಕೇಳಿಕೊಳ್ಳುವುದು ನನಗೇನು ಬೇಕಾಗಿರಲಿಲ್ಲ. ನನ್ನ ಕಿವಿ ತೆರೆದಿರಲಿ ಮುಚ್ಚಿರಲಿ, ಆ ಗಟ್ಟಿಗ ಹೇಳಿಯೇ ಹೇಳಿದ: “ ನನ್ನ ಹೆಸರು ದೀನೇಶ. ನಮ್ಮ ಮನೆ ಕಾಂಸಾರಿ ಪಾಡೆಯಲ್ಲಿದೆ. ಶಾಲಬನಿ ಟಿ ಇಸ್ಟೇಟಿನ ಕಲಕತ್ತಾ ಕಚೇರಿಯ ಆಡಳಿತವನ್ನು ನೋಡುತ್ತಿದ್ದೇನೆ. ತಿಂಗಳಿಗೆ ಎರಡುನೂರೈವತ್ತು ರೂಪಾಯಿ ವೇತನ ಸಿಕ್ಕುತ್ತಿದೆ. ಮನೆಯಲ್ಲಿ ನನ್ನವರೆಂಬವರು ಯಾರೂ ಇಲ್ಲ. ಆಳು-ಅಡಿಗೆಯವರ ಅನುಗ್ರಹದ ಆಸರೆಯಿಂದ ಹೇಗೂ ಜೀವನ ನಡೆದಿದೆ. ನನ್ನ ಅಸ್ತವ್ಯಸ್ತವಾದ ಬಾಳನ್ನು ಓರಣಗೊಳಿಸುವಂಥವರು, ಯಾರಾದರೂ ನನ್ನ ಮನಸಿಗೆ ತಕ್ಕಂಥವರು ಸಿಕ್ಕುತ್ತಾರೋ ಎಂದು ಹುಡುಕುತ್ತಲಿದ್ದೆ. ನನ್ನ ಧಿಟ್ಟತನವನ್ನು ಕ್ಷಮಿಸಿರಿ—ತಮ್ಮ—ಈ ಮಾತನ್ನಾಡಲು ಮನಸು ಹಿಂಜರಿಯುತ್ತಿದೆ—ತಾವು ಮನಸಿನಲ್ಲೇನೂ ತಿಳಿಯಕೊಳ್ಳುವುದಿಲ್ಲವಾದರೆ, ದಯವಿಟ್ಟು ನನ್ನ ಮನೆಯ ಆಡಳಿತವನ್ನು ತಾವು ವಹಿಸಿಕೊಂಡು ನೆರವಾದರೆ ನಾನು ನಿಶ್ಚಿಂತನಾಗುವೆ. ”

ನನಗೆ ಅಂಗಾಲಿಂದ ನೆತ್ತಿಯ ವರೆಗೂ ಕಾವು ತುಂಬಿತು. ನಾನೇನು ಅವನ ಊಳಿಗದ ಹುರಿಯಾಳಾಗಲು ಬೇಡಿಕೊಂಡು ಹೋಗಿದ್ದೆನೇ—ಕೆಲಸ

ಕೊಡುತ್ತೀನೆನ್ನಲಿಕ್ಕೆ ! ನಾನು ತಲೆ ತಗ್ಗಿಸಿಕೊಂಡು ಸುಮ್ಮನೆ ಕುಳಿತುಬಿಟ್ಟೆ. ಹಾಂ ಎನ್ನಲಿಲ್ಲ, ಹೂಂ ಎನ್ನಲಿಲ್ಲ.

ಮನುಷ್ಯ ಭಯಂಕರ ಉಡದ ಹಿಡಿತದವನವ್ವಾ. ಅವನ ಮನೆಯ ವ್ಯವಸ್ಥಾಪಿಕೆಯಾಗುವುದು ನನಗೆ ತಪ್ಪುವುದಿಲ್ಲವೆಂದು ತೋರುತ್ತಿದೆ. ತಾಯಿಯೂ ಅವನ ಕಡೆಗೇ. ಪುಷಿ ಮತ್ತು ನರು ಇಬ್ಬರದೂ ಒತ್ತಾಯವೇ. ತಿಂಡಿಯ ಲಂಚದ ಪ್ರಭಾವವೇ ಇರಬೇಕು ! ನಾನು ಅತ್ಯಂತ ನಿರುಪಾಯ ಳಾಗಿದ್ದೇನೆ. ನನಗೆ ಸ್ವಲ್ಪವಾದರೂ ಆಗ್ರಹವಿದೆಯೆಂದು ಭಾವಿಸಲಾಗದು. ನಾಲ್ಕು ಜನರ ಅನುರೋಧದಿಂದ ಮನುಷ್ಯ ಹೀಗೆ ವಿಪತ್ತಿನಲ್ಲಿ ಬೀಳುವು ದುಂಟು.

ಸಾಕಿದ ಪಕ್ಷಿ ಹಾರಿಹೋದರೆ, ಪಂಜರವನ್ನು ತೆರೆದು ಮುಂದೆ ಹಿಡಿದರೆ, ತಿರುಗಿ ಒಳಗೆ ಹೋಗುತ್ತದೆ. ಪಂಜರದ ಹೊರಗಿನ ಸ್ವಾತಂತ್ರ್ಯದ ಆನಂದ ನೆಟ್ಟಗೋ, ಇಲ್ಲವೆ, ಪಂಜರದಲ್ಲಿಯ ನಿಶ್ಚಿಂತವಾದ ಹೊಟ್ಟೆಬಟ್ಟೆಗಳ ಏರ್ಪಾಡೇ ಸುಖಕರವೋ ಅದಕ್ಕೆ ತಿಳಿಯುವುದೇ ಇಲ್ಲ........

ಇತಿ

ನಿನ್ನ ಲಾವಣ್ಯ.

—

# ಇಂದುಲೇಖೆ



'ಇಂದುಲೇಖಾ' ಮಾಸಪತ್ರಿಕೆಯ ಸಂಪಾದಕ ಮನೋಮೋಹನ ನನಗೆ ತುಂಬ ಪರಿಚಿತ. ಆ ಮನುಷ್ಯ ನನಗೆ ಬಹಳ ಸೇರಿದ್ದ. ವಿನಯಿ, ಇಲ್ಲದ ಆಡಂಬರ ಇಲ್ಲದವ, ಒಳ್ಳೆಯ ನಿರೀಹ ಜನ: ತಪಸ್ವಿಯಂತೆ ಯಾವಾಗಲೂ ಓದುಬರೆಹದಲ್ಲಿ ಮುಳುಗಿರುತ್ತಿದ್ದ. ದೃಢನಿಷ್ಠೆಯ ಬಲದಿಂದ, ಅಲ್ಪವಾಗಿ ಹೊರಟಿದ್ದ ಇಂದುಲೇಖೆಯನ್ನು ಇಂದು ಶ್ರೇಷ್ಠಪತ್ರಿಕೆಯಾಗಿ ರೂಪುಗೊಳಿಸಿದ್ದಾನೆ. ಮನೋಮೋಹನನ ಕತೆ-ಕಾದಂಬರಿಗಳನ್ನೋದಲು ಆತುರರಾದ ಸಾವಿರಾರು ನರನಾರಿಯರು ಮನೆ-ಮನೆಯಲ್ಲಿಯೂ ಪತ್ರಿಕೆ ಬರುವುದನ್ನು ಎದುರುನೋಡುತ್ತಿರುತ್ತಾರೆ. ಆಗಾಗ ನಾನು ಅವನ ಮನೆಗೆ ಹೋಗಿ ಅವನೊಡನೆ ಸಾಹಿತ್ಯ ಚರ್ಚೆ ನಡೆಸುತ್ತಿರುವೆ; ಒಂದಿಲ್ಲೊಂದು ಹೊಸ ವಿಷಯವನ್ನು ಕಲಿತುಕೊಂಡು ಬರುವೆ.

ಹಾಗೊಮ್ಮೆ ಅಲೆದಾಡುತ್ತ ಮನೋಮೋಹನನ ಮನೆಗೆ ಹೋಗಿದ್ದೆ. ಅವನು ಮದುವೆಮಾಡಿಕೊಂಡಿಲ್ಲ; ಮನೆಯಲ್ಲಿ ಬೇರೆ ಬಳಗದ ಹೆಣ್ಣುಮಕ್ಕಳೂ ಇಲ್ಲ; ನಾನು ಎಗ್ಗಿಲ್ಲದೆ ನೆಟ್ಟಗೆ ಅವನ ಕೋಣೆಗೆ ಹೋಗುತ್ತಿದ್ದೆ. ಅಂದು ಮನೋಮೋಹನನ ಮೇಜಿನ ಬಳಿ ಹೋಗಿ ಕುಳಿತುಕೊಳ್ಳುತ್ತಲೆ, ಅಂದವಾದ ಕುಸುರಿನ ಕೆಲಸಮಾಡಿದ ಆನೆದಾಡೆಯ ಭಾವಚಿತ್ರದ ಕಟ್ಟೊಂದು ನನ್ನ ಕಣ್ಣಿಗೆ ಬಿದ್ದಿತು. ಇಷ್ಟು ಸೊಗಸಾದ ಕಟ್ಟಿನಲ್ಲಿ ಇವನು ಯಾರ ಚಿತ್ರ ಇಟ್ಟಿರಬಹುದಪ್ಪ ಎಂಬುದನ್ನು ಅರಿತುಕೊಳ್ಳಲು ನನಗೊಳ್ಳೇ ಕುತೂಹಲವುಂಟಾಯಿತು.

"ಅದು ಯಾರ ಭಾವಚಿತ್ರ ?" ಎಂದು ಕೇಳಿದೆ.

" ಭಾವಚಿತ್ರವಲ್ಲ. " ಲಜ್ಜಿತ ಭಾವದಿಂದ ಮನೋಮೋಹನ ಉತ್ತರ ವಿತ್ತ.

" ಏನು ? "

" ಅಂತಹ ವಿಶೇಷವಾದುದೇನೂ ಅಲ್ಲ, ಅದೊಂದು ನನ್ನ ಹುಚ್ಚಾಟ ವಷ್ಟೆ. " ಅವನು ಇನ್ನಷ್ಟು ಕುಂಠಿತನಾಗಿ ಹೇಳಿದ.

ಅದನ್ನು ನನಗೆ ತೋರಿಸಲು ಮನೋಮೋಹನನಿಗೆ ಮನಸಿರಲಿಲ್ಲ. ನಾನೇ ಎದ್ದು ಆ ಚೌಕಟ್ಟನ್ನು ಈ ಕಡೆ ಮುಖಮಾಡಿ ತಿರುಗಿಸಿಟ್ಟೆ. ಅದರಲ್ಲಿ ಭಾವಚಿತ್ರವಿರಲಿಲ್ಲ, ಬಣ್ಣದ ಕಲಾಕೃತಿಯಿರಲಿಲ್ಲ—ಅಂಚೆಯಿಂದ ಬಂದ ಒಂದು ಪೋಸ್ಟ್‌ಕಾರ್ಡು! ಎಂತಹ ಮಿಗಿಲಾದ ಮನೆಯೊಳಗೆ ಎಂತಹ ಸಾಮಾನ್ಯ ವಸ್ತು! ಕುತೂಹಲದಿಂದ ಓದಿದೆ. ಪ್ರೇಮದ ವಿಷಯವಿಲ್ಲ, ಆತ್ಮೀಯತೆಯಿಂದ ಬರೆದ ಮಾತುಗಳಿಲ್ಲ,—ಅಪರಿಚಿತರು ಯಾರೋ ಬರೆದ ನಾಲ್ಕು ವ್ಯವಹಾರದ ಶಬ್ದಗಳು.

" ಶ್ರೀಯುತ ' ಇಂದುಲೇಖಾ ' ಸಂಪಾದಕ ಮಹಾಶಯರಿಗೆ— ಸವಿನಯ ನಿವೇದನೆ. ಕಾರ್ತಿಕದ ಇಂದುಲೇಖೆ ಕೈಸೇರಿದೆ. ಆದರೆ ಅದರಲ್ಲಿ ೧೨ನೆಯ ಪುಟದ ತರುವಾಯ ಒಮ್ಮೆಲೆ ೧೧೫ನೆಯ ಪುಟವಿದೆ, ನಡುವಿನ ಕೆಲವಿಲ್ಲ; ಮತ್ತು ಕೊನೆಯಲ್ಲಿ ೧೪೯ರಿಂದ ೧೫೬ ಪುಟಗಳು ಎರಡು ಸಲ ಬಿದ್ದಿವೆ. ಇದರಿಂದ ' ಬಂಗಾರ ಕೋಲು ' ಎಂಬ ಕತೆ ಅಪೂರ್ಣವಾಗಿದೆ ಆ ಕೆಲವು ಇಲ್ಲದ ಪುಟಗಳನ್ನು ದಯವಿಟ್ಟು ಬೇಗ ಕಳುಹಿದರೆ ಕೃತಜ್ಞಳಾಗುವೆ. ಇತಿ—ಶ್ರೀ ಇಂದುಲೇಖಾ ಸೇನ ಚಂದಾ ಸಂಖ್ಯೆ ೪೭೬೫."

ನಾನು ನಕ್ಕು ನುಡಿದೆ: " ಇಷ್ಟು ಜನ ಚಂದಾದಾರರಿದ್ದು, ಈ ಗ್ರಾಹಿಕೆಯ ಬಗ್ಗೇ ನಿನಗೇಕಿಷ್ಟು ಪಕ್ಷಪಾತ ? ಹೇಳು. "

ಮನೋಮೋಹನನು ಲಜ್ಜೆಗೂಡಿದ ನಗೆ ನಕ್ಕು ಹೇಳಿದ: " ಅದೇನೂ ಇಲ್ಲ ಇದು ನನ್ನ ಲಹರಿಯಷ್ಟೆ. ಇದರಲ್ಲಿ ನೀನೆಷ್ಟು ರೋಮಾನ್ಸ್ ಇದೆಯೆಂದು ಎಣಿಸುತ್ತಿರುವೆಯೊ, ಅದು ಎಷ್ಟು ಮಾತ್ರವೂ ಇಲ್ಲ. "

ಆ ಕಾರ್ಡಿನ ಹಿಂಬದಿಯಲ್ಲಿಯ ಕಥೆಯನ್ನು ತಿಳಿದುಕೊಳ್ಳಲು ನಾನು

ಹಟಕ್ಕೇ ಬಿದ್ದೆ. " ಇದರ ಗುಟ್ಟನ್ನು ಬಿಚ್ಚಿ ಹೇಳಲೇಬೇಕು ಮನೋ. ಈ ಇಂದುಲೇಖೆ ನಿನಗೆ ಯಾರು ? "

ಮನೋಮೋಹನನು ಗಂಭೀರ ವಿಷಣ್ಣನಾಗಿಬಿಟ್ಟ. ಎಷ್ಟೋ ಹೊತ್ತು ತಲೆ ತಗ್ಗಿಸಿಕೊಂಡು ಸುಮ್ಮನೆ ಕುಳಿತ. ಆಮೇಲೆ ತನ್ನ ಜೀವನದ ಕರುಣ ಕಥೆಯನ್ನು ಅವನು ಹೇಳಲಾರಂಭಿಸಿದ.

—ಇಂದುಲೇಖೆ ನನಗೆ ಯಾರು ? ಯಾರೂ ಅಲ್ಲ. ಇಂದುಲೇಖೆ ನನಗೆಲ್ಲವೂ. ಮೊದಲ ಹರಯದಲ್ಲಿ ನಾನು ನಿರ್ಬಾಂಧವನಾಗಿ ಒಬ್ಬೊಂಟಿಗ ನಾಗಿದ್ದೆ. ಆ ಸಮಯದಲ್ಲಿ ಈ ಇಂದುಲೇಖೆಯನ್ನು ಕಂಡು ಅತ್ಯಂತ ಆತ್ಮೀಯ ಳೆಂಬ ಭಾವನೆ ಹುಟ್ಟಿತು. ಆಕೆಯನ್ನು ಮೊದಲ ಬಾರಿ ಕಂಡ ದಿನದ ನೆನಪು ಬಲು ಸೊಗಸಾದುದು.

ವೈಶಾಖದ ಇಳಿಹೊತ್ತಿನ ಹಗಲು. ನಮ್ಮ ನೆರೆಮನೆಯ ಕೈದೋಟದ ಗಿಡಬಳ್ಳಿಗಳಿಗೆ, ಹಾದಿಗಳಿಗೆ ಆದೇ ತಳಿಹಾಕಿತ್ತು. ನೀರುಂಡ ಹೂಗಳ ಮತ್ತು ನೆಲದ ಕಂಪಿನಿಂದ ಗಾಳಿ ಮಧುರವಾಗಿತ್ತು. ಕಿಶೋರಿಯೊಬ್ಬಳು ಬಂದು ಹೂ ಕೊಯ್ಯಲು ತೊಡಗಿದಳು. ಹೂವಿನಂತೆಯೇ ಅಂದವಾದ ಹುಡುಗಿ. ಆ ಗುರುತಿಲ್ಲದ ಸ್ಥಳದಲ್ಲಿ ಗುರುತಿಲ್ಲದ ಹುಡುಗಿ ನನ್ನನ್ನು ಕಂಡು, ಚಿರಪರಿಚಿತರಂತೆ ನಕ್ಕ ಆ ಸ್ನಿಗ್ಧ ಹಾಸ್ಯ ನನ್ನ ಮರ್ಮದಲ್ಲಿ ಇನ್ನೂ ನಟ್ಟಿದೆ.

ಅವಳ ಗುರುತನ್ನು ಅರಿತುಕೊಳ್ಳಲು ತಡವಾಗಲಿಲ್ಲ. ಅವರ ಮನೆ ನಮ್ಮ ಅಕ್ಕನ ಮನೆಗೆ ಹೊಂದಿದ್ದೇ. ಆ ಮನೆಯವರೆಲ್ಲರೊಡನೆಯೂ ಅಕ್ಕನ ಸಂಬಂಧ ಧಾರಾಳವಾಗಿ ಬೆಳೆದಿದ್ದಿತು. ನಾನು ಆಗ ಕಲಿಯಲೆಂದು ಬಾಂಕಿ ಪುರಕ್ಕೆ ಹೋಗಿ ಅಕ್ಕನ ಮನೆಯನ್ನೇ ಆಶ್ರಯಿಸಿಕೊಂಡಿದ್ದೆ.

ನಮ್ಮ ತಾಯಿ ನನ್ನ ಚಿಕ್ಕಂದಿನಲ್ಲಿಯೇ ತೀರಿಕೊಂಡಿದ್ದರು. ಆಮೇಲೆ ನನ್ನ ಎಂಟ್ರನ್ಸ್ ಪರೀಕ್ಷೆಯ ಮೊದಲೆ ತಂದೆಯೂ ಹೊರಟುಹೋದರು. ನನ್ನ ಹೊಟ್ಟೆ-ಒಟ್ಟೆಗಾಗಲಿ, ಓದುಬರೆಹಕ್ಕಾಗಲಿ ಅವರು ಏನೂ ಮಾಡಿಟ್ಟು ಹೋಗಲಿಲ್ಲ. ಪ್ರವೇಶ ಪರೀಕ್ಷೆಯಾಗಿಂದೆ ನಮ್ಮಕ್ಕ ತಮ್ಮ ಮನೆಗೆ ಕರೆದು ಕೊಂಡು ಹೋಗಿ ನನ್ನ ಪೋಷಣೆಯ ಮತ್ತು ಶಿಕ್ಷಣದ ಹೊಣೆಯನ್ನು ವಹಿಸಿ ದಳು. ನಮ್ಮ ಭಾವ ಬಾಂಕಿಪುರದಲ್ಲಿ ವಕೀಲರು. ಇಂದುಲೇಖೆಯ ತಂದೆ ಪತಿತಪಾವನ ಬಾಬು ಸಬ್‌ಜಜ್ಜಾಗಿದ್ದರು.

ಇಂದುಲೇಖೆಯವರ ತೋಟಕ್ಕೆ ಹೊಂದಿದ ಕೋಣೆಯನ್ನು ನನಗೆ ಕೊಡಲಾಗಿತ್ತು. ಒಮ್ಮೆ ನಾನು ಅಲ್ಲಿ ಓದುತ್ತ ಕುಳಿತಿದ್ದೆ. ಗುಲಾಬಿಹೂವಿನ ಹೊಡೆತದಿಂದ ನನ್ನ ತನ್ಮಯತೆ ಭಗ್ನವಾಯಿತು. ಮೊಗವೆತ್ತಿ ಕಿಡಿಕಿಯತ್ತ ನೋಡಿದೆ. ಎರಡು ಕೈಗಳಿಂದಲೂ ಕಂಬಿಗಳನ್ನು ಹಿಡಿದುಕೊಂಡು ಇಂದುಲೇಖೆ ನಗುತ್ತ ನಿಂತಿದ್ದಳು. ಈ ಬಗೆಯ ನಗೆಚಾಟಿಕೆ ಹುಡುಗಾಟಿಕೆಯ ಅವಳ ಆಟ ದಿನವೂ ಇದ್ದುದೇ. ಒಮ್ಮೊಮ್ಮೆ ಅವಳು ನಗುತ್ತ ಸುರಿವ ಜಾಜಿ ಹೂಗಳಿಂದ ನನ್ನ ಪುಸ್ತಕ ಮುಚ್ಚಿ ಹೋಗಿ ಓದು ನಿಂತುಬಿಡುತ್ತಿತ್ತು. ಎಷ್ಟೋ ಸಲ ಅವಳು ಸದ್ದಿಲ್ಲದೆ ಹಿಂದಿನಿಂದ ಬಂದು ನನ್ನ ಕಣ್ಣುಗಳನ್ನು ಮುಚ್ಚುವಳು. ನಾನು ಏನೋ ಒಂದು ಹೆಸರು ಹೇಳಿ ಕೈ ತೆಗೆಸುವೆ ಅವಳು ಚಪ್ಪಾಳೆ ತಟ್ಟಿ ಕುಣಿದು ನಗುತ್ತ "ಓ ಸೋತಿರಿ ಸೋತಿರಿ" ಎಂದೆನ್ನುವಳು, ಇಂತಹ ಸೋಲು ನನಗೆ ಆಸರಂತ ಆಗುತ್ತಿತ್ತು. ಆದರೂ ಇಂದುಲೇಖೆಯ ನಗೆ ಕಡಿಮೆಯಾದ ದಿನವೇ ಇಲ್ಲ. ನಿತ್ಯ ಘಟನೆಗಳಿಂದ ನನಗೆ ಬೇಸರವೆನಿಸಿದುದೂ ಇಲ್ಲ.

ಇಂದುಲೇಖೆಯ ಕದ್ದುಮುಚ್ಚಿ ಪತ್ರಿಕೆ, ಕಾದಂಬರಿಗಳನ್ನು ಓದುವ ಚಟದಿಂದಾಗಿ ನಮ್ಮಿಬ್ಬರಲ್ಲಿಯೂ ಮೈತ್ರಿ ಚೆನ್ನಾಗಿ ಹೊಂದಿಕೆಯಾಯಿತು. ಅವರ ತಂದೆ ಸಬ್‌ಜಜ್ ಮಹಾಶಯರು ಪತ್ರಿಕೆ ಮೊದಲಾದವನ್ನು ತರಿಸಿ ಸುಮ್ಮನೆ ದುಡ್ಡು ಹಾಳು ಮಾಡುವ ದುರಭ್ಯಾಸಕ್ಕೆ ಮನಸುಗೊಟ್ಟಿರಲಿಲ್ಲ. ಕಥೆ-ಕಾದಂಬರಿ ಓದುವುದು ಹದಿನಾಲ್ಕು ವರ್ಷದ ಮಗಳಿಗೆ ನಿಷಿದ್ಧವೆಂದು ನೀತಿ ನಿಬಂಧನೆಯಿದ್ದಿತು. ಓದುವುದನ್ನು ಕಾಣದ ಹಾಗೆ, ತಿಳಿಯದ ಹಾಗೆ ಓದಬೇಕು; ಇಂದುಲೇಖೆ. ಆಕೆಯ ಕಳವಿನ ಓದಿಗೆ ನನ್ನ ಆಸರ.

ಈ ಆನಂದದಲ್ಲಿ ಕೆಲವು ವರ್ಷಗಳು ಗತಿಸಿದವು.

ನಾನು ಬಿ. ಎ. ಓದುತ್ತಿದ್ದೆ. ಇಂದುಲೇಖೆಯ ಮದುವೆಯ ಮಾತು ನಡೆದಿದೆಯೆಂದು ಕಿವಿಗೆ ಬೀಳಲು ಮೊದಲಾಯಿತು. ನನ್ನ ಮನಸಿಗೆ ಏಕೋ ಏನೋ ಒಂದು ಬಗೆಯ ಪೆಟ್ಟು ತಗುಲಿದಂತಾಯಿತು—ಇಂದುಲೇಖೆಯ ಮದುವೆ; ಇಷ್ಟು ಬೇಗ! ಲೆಕ್ಕಮಾಡಿ ನೋಡಿದೆ; ಅವಳ ವಯಸ್ಸು ಹದಿನಾರರ ಗೆರೆಯನ್ನು ಮೀರುವುದರಲ್ಲಿತ್ತು. ಪತಿತಪಾವನಬಾಬು ದೇಶಾಂತರದಲ್ಲಿ ಇದ್ದ ಬಂಗಾಲಿಗಳಾದುದರಿಂದ ಅವಳ ಮದುವೆ ಇಷ್ಟರೊಳಗಾಗಿ ಸಾಧ್ಯ

ವಾಗಿರಲಿಲ್ಲ. ಇಂದುವಿನ ವಿವಾಹದ ಮಾತು ನಾಲ್ಕು ಕಡೆಗಳಿಂದಲೂ ಕೇಳ ತೊಡಗಿದಂತೆ ನನ್ನ ಮನದಲ್ಲೆಲ್ಲಿಯೋ ಒಂದು ಕಡೆ ಹಾಹಾಕಾರ ಒಟ್ಟಯಿಸು ತ್ತಿತ್ತು.

ಈಗ ಇಂದು ನನ್ನ ಮೇಲೆ ಹೂಗಳನ್ನು ಎರೆಯುತ್ತಿರಲಿಲ್ಲ. ನನ್ನ ಕಣ್ಣುಗಳನ್ನು ಮುಚ್ಚಿ ಹೊಟ್ಟೆ ಹುಣ್ಣಾಗುವಂತೆ ನಗುವ ಹುಡುಗಾಟವೂ ನಿಂತುಹೋಗಿತ್ತು. ಅಂದಿನ ಆ ಪರಿಯ ಇಂದು, ಇಂದು ಮದುವೆಯ ಪ್ರಸಂಗದಿಂದ ಗಾಂಭೀರ್ಯದ ಬಿಗುವಿಗೊಳಗಾಗಿದ್ದಳು.

"ಇಂದೂ, ಮದುವೆ ಎಲ್ಲಿಯಾದರೂ ಗೊತ್ತಾಯಿತೆ ?" ಒಂದು ದಿನ ನಗುನಗುತ್ತ ನಾನು ಕೇಳಿದೆ.

ಇಂದುಲೇಖೆ ಮಾತನಾಡಲಿಲ್ಲ. ನೀರುನೀರಾದ ಕಣ್ಣುಗಳಲ್ಲಿ ಅವ-ಹೇಳನೆಯನ್ನು ತೋರುತ್ತ ನನ್ನ ಮೋರೆಯ ಕಡೆಗೊಮ್ಮೆ ನೋಡಿ ಅವಳು ಹೊರಟುಹೋದಳು. ನಾನು ಕುಂಠಿತನಾಗಿ ಮರಳಿ ಬಂದೆ. ಆ ಮೇಲೆಂದೂ ಇಂದುಲೇಖೆಯೊಡನೆ ಅವಳ ವಿವಾಹದ ವಿಷಯವನ್ನು ವಿಚಾರಿಸಲಾಗಲಿಲ್ಲ.

ಮದುವೆ ಇಂದುಲೇಖೆಯದು. ಆದರೆ ನನ್ನ ಹಗಲಿನ ಕೆಲಸಗಳು, ಇರುಳಿನ ವಿರಾಮ ನಿಂತುಹೋದವು. ಅವಳನ್ನು ಸಹಜಭಾವದಿಂದ ಕಾಣು ವುದು ಅಸಾಧ್ಯವಾಯಿತು. ಎಷ್ಟೋ ಯೋಚಿಸಿದೆ, ಚಿಂತಿಸಿದೆ. ಬಗೆಹರಿಯದೆ ಕೊನೆಗೆ ನನ್ನ ಸಹಪಾಠಿ ಮಿತ್ರ ಅನಾದಿಯನ್ನು ಮರೆಹೊಕ್ಕೆ.

ಅನಾದಿ ಪತಿತಪಾವನರ ಹತ್ತಿರ, ಆ ಮಾತು ಈ ಮಾತು ಆಡುತ್ತ, "ಇಂದುವಿನ ಮದುವೆ ಎಲ್ಲಿಯಾದರೂ ಗೊತ್ತಾಯಿತೆ ?" ಎಂದು ಪ್ರಸ್ತಾಪ ತೆಗೆದ.

"ಇಲ್ಲ ಇನ್ನೂ. ನಿಮ್ಮ ಗೊತ್ತಿನಲ್ಲಿ ಎಲ್ಲಿಯಾದರೂ ಯೋಗ್ಯ ವರ ಇವೆಯೆ ?" ಎಂದರು ಪತಿತಪಾವನ ಬಾಬು.

"ನನ್ನ ದೃಷ್ಟಿಯಲ್ಲಿ ಒಬ್ಬ ಇದ್ದಾನೆ. ನಮ್ಮ ಮನೋಮೋಹನ; ಬಿ. ಎ. ಓದುತ್ತಿದ್ದಾನೆ...."

ಈ ಸೂಚನೆಯನ್ನು ಕೇಳಿ ಪತಿತಪಾವನರ ಮುಖದಲ್ಲಿ ವಿಲಕ್ಷಣ ಆಶ್ಚ ರ್ಯವು ಪ್ರಸ್ಫುಟಿತವಾಯಿತು. "ಯಾರು, ಮೋಹನೊ ? ಭಾವನಿಗೆ ತಲೆ-

ಭಾರವಾಗಿದ್ದ ಹುಡುಗನಿಗೆ ನಮ್ಮ ಇಂದುವನ್ನು ಕೊಡುವುದೆ? ಅದಕ್ಕಿಂತ ಮಗಳನ್ನು ಕೈಕಾಲು ಕಟ್ಟಿ ಬಾವಿಯೊಳಗೆ ಹಾಕಿಬಿಡಬೇಕು!" ಎಂದು ಅವರು ಅವಜ್ಞೆಯ ನಗೆಯನ್ನು ನಕ್ಕರು. ಈ ಪ್ರಸ್ತಾಪವು ಅತ್ಯಂತ ಅಯುಕ್ತವೆಂದು ಸ್ಪಷ್ಟವಾಗಿ ಸೂಚಿಸುವಂತಿತ್ತು ಆ ನಗೆಯ ಭಾವ.

ಆದರೂ ಅನಾದಿ ಬಿಡದೆ, "ಏಕೆ, ಮನೋಮೋಹನ ಹುಡುಗ ಕೆಟ್ಟಿಲ್ಲ. ನಡೆ-ನುಡಿ ಒಳ್ಳೆಯದು, ತುಂಬಾ ಬುದ್ಧಿವಂತ, ಬಿ. ಏ. ಆಗಿ ಬೇಕಾದ ಹಾಗೆ ಡೆಪುಟಿ ಮ್ಯಾಜಿಸ್ಟ್ರೇಟ್ ಆಗಬಲ್ಲ. ವಕೀಲಿ ಕಲಿತರೂ ಭಾವನ ಮತ್ತು ತಮ್ಮ ಸಹಾಯದಿಂದ ಶೀಘ್ರವೇ ಜಯಶೀಲನಾಗುತ್ತಾನೆ."

ಪತಿತಪಾವನ ಬಾಬು ವಿಜ್ಞತೆಯನ್ನು ಪ್ರದರ್ಶಿಸುವ ನಗೆ ನಕ್ಕು ನುಡಿದರು: "ಬಿಸಿಲುಗುದುರೆಯ ಅಥವಾ ಮಾಯಾಮೃಗದ ಮಾತು ಬೇಡ; ತಯಾರಿ ಡೆಪುಟಿ ಮ್ಯಾಜಿಸ್ಟ್ರೇಟ್ ಅಥವಾ ಹೆಸರಾದ ವಕೀಲರು ಯಾರಾದರೂ ಇದ್ದರೆ ಹೇಳಿರಿ. ಅಲ್ಲದೆ, ಕನಸಿನೊಳಗಿನ ಗಂಟಿಗೆ ಹಂಬಲಿಸದೆ ಓದಿಕೊಂಡಿರೆಂದು ಮನೋಗೆ ತಿಳಿಸಿರಿ."

ಆಮೇಲೆ ಮತ್ತೆ ಮಾತುಗಳು ನಡೆಯಲಿಲ್ಲ. ಆದರೆ ಈ ವಿಷಯವಾಗಿ ಎರಡೂ ಮನೆಗಳಲ್ಲಿ ಬಹಳವಾಗಿ ಆಲೋಚನೆಗಳಾದವು. ನಾನು ನಾಚಿಕೆಯಿಂದ ನರಸತ್ತವನಾಗಿದ್ದೆ. ಇಂದುವನ್ನು ಕಾಣುವುದೂ ನನಗೆ ಕಠಿನವೆನಿಸತೊಡಗಿತು. ನಾನು ಅವಳನ್ನು ಪ್ರೀತಿಸುವೆನೆಂಬುದನ್ನು ಬಾಯಿಬಿಚ್ಚಿ ಹೇಳಲಾರದೆ ಹೋದೆ. ವ್ಯರ್ಥವಾಗಿ ಈ ಪ್ರಸ್ತಾಪವನ್ನು ಏಕೆ ತೆಗೆಸಿದೆನೊ ಎಂದೆನಿಸಿತು.

ಒಂದು ದಿನ ಹೊಸದಾಗಿ ಡೆಪುಟಿ ಮ್ಯಾಜಿಸ್ಟ್ರೇಟನಾಗಿದ್ದವನೊಬ್ಬ ರಾಹುವಾಗಿ ಇಂದುಲೇಖೆಯನ್ನು ಕಬಳಿಸಲು ಬಂದ. ಆತನ ಹಣೆಯಲ್ಲಿ ತಿಲಕ, ಕೊರಳಲ್ಲಿ ರುದ್ರಾಕ್ಷಮಾಲೆ, ಕೈಯಲ್ಲಿ ತಾಯಿತ, ಬೆರಳಲ್ಲಿ ಅಷ್ಟಧಾತುವಿನ ಉಂಗುರ. ನೋಡಿ 'ಡೆಪುಟಿ ಬಾಬು ನಿಷ್ಠಾವಂತ ಹೌದಪ್ಪ.' ಎಂದುಕೊಂಡೆ.

ಮದುವೆಯಲ್ಲಿ ನಾನು ಹೆಣ್ಣಿನವರ ಬಳಗದಲ್ಲಿ ಸೇರಿದ್ದೆ. ಮದುವೆಯ ದಿನ ಸಂಜೆಯ ಮುಂದೆ ನಾನು ಪತಿತಪಾವನರ ಮನೆಯಲ್ಲಿ, ಗಂಡಿನ ದಿಬ್ಬಣ

ದವರ ಊಟ-ಉಪಚಾರಗಳ ಕೆಲಸದಲ್ಲಿ ನೆರವಾಗುತ್ತಿದ್ದೆ. ಆಗ ಪತಿತ ಪಾವನ ಬಾಬು ನನ್ನನ್ನು ಕೂಗಿ, "ಮನೂ, ನನ್ನ ಕೋಣೆಯೊಳಗಿನ ಜಮಖಾನೆಯನ್ನು ತಂದು ಮದುವೆಯ ಸ್ಥಳದಲ್ಲಿ ಹಾಕಬೇಕಪ್ಪ" ಎಂದು ಅಜ್ಞಾಪಿಸಿದರು.

ನಾನು ಅವರ ಕೋಣೆಗೆ ಓಡಿದೆ. ಒಳಗೆ ಕಾಲಿಟ್ಟೊಡನೆ ಅಲ್ಲಿಯ ದೃಶ್ಯ ನನ್ನನ್ನು ದಿಙ್ಮೂಢನನ್ನಾಗಿ ಮಾಡಿತು. ಇಂದುವೊಬ್ಬಳೇ—ತಾವರೆಬಣ್ಣದ ವಸ್ತ್ರ ಧರಿಸಿ, ತೊಡೆಯ ಮೇಲೆ ಚಂಡೀಗ್ರಂಥವನ್ನಿಟ್ಟುಕೊಂಡು, ಚೌಕಿಯ ಮೇಲೆ ಮದುವೆಯ ಸಮಯಕ್ಕಾಗಿ ಕಾದು ಕುಳಿತಿದ್ದಳು ಅವಳೆದುರು ಎರಡು ಸಮೆಗಳು ಉರಿಯುತ್ತಿದ್ದವು 'ಕನೆ-ಚಂದನ' ಹಚ್ಚಿಕೊಂಡ ಇಂದುಲೇಖೆಯ ಮುಖಕ್ಕೆ, ಆ ದೀಪಗಳ ಬೆಳಕು ದಿವ್ಯಶ್ರೀಯನ್ನು ನೀಡಿದ್ದಿತು

ಇಂದು ಮೊಗವೆತ್ತಿ ನನ್ನ ಕಡೆಗೊಮ್ಮೆ ನೋಡಿದಳು ಒಡನೆಯೇ ಅವಳ ಕೆನ್ನೆಯ ಪತ್ರಲೇಖೆಯನ್ನು ತೊಳೆದು ಅಶ್ರುಪ್ರವಾಹ ಹರಿಯತೊಡಗಿತು.

ಆಮೇಲೆ ನಾನೇನು ಮಾಡಿದೆ ಏನು ಬಿಟ್ಟೆ ಎಂಬುದು ಗೊತ್ತಿಲ್ಲ ಅನಾದಿ ಬಂದು ನನ್ನನ್ನು ಅಲುಗಿಸಿ ಕೂಗಿ ಕರೆದ: "ಮನೂ ಮನೂ, ಪತಿತ ಪಾವನ ಬಾಬು ನಿನ್ನನ್ನು ಹುಡುಕುತ್ತಿದ್ದಾರೆ, ನಡೆ."

ನಾನು ಎಚ್ಚತ್ತು ನೋಡಿದೆ ಯಾವಾಗಲೋ ನನ್ನ ಕೋಣೆಗೆ ಬಂದು ಮಲಗಿದ್ದೇನೆಂದು ತಿಳಿಯಿತು. ಕಂಬನಿಗಳ ಉಕ್ಕನ್ನು ಅತಿ ಪ್ರಯಾಸದಿಂದ ತಡೆದು ನಾನು ಉತ್ತರವಿತ್ತೆ: "ನನಗೆ ಜ್ವರ ಬಂದಿವೆ, ಬರುವಂತಿಲ್ಲವೆಂದು ಹೇಳು."

ಅನಾದಿ ನೀರವವಾಗಿ ತನ್ನೊಲವಿನ ಕೈಯನ್ನು ನನ್ನ ಹಣೆಯ ಮೇಲಾಡಿಸಿ, ನಿಟ್ಟುಸಿರನ್ನು ಬಿಟ್ಟು ಹೊರಟುಹೋದ

ಮರುದಿನ ವಧು-ವರರನ್ನು ಬೀಳ್ಕೊಡುವುದು. ಇಂದುವಿನೆದುರು ಚಿತ್ತವನ್ನು ಸಾವರಿಸಿಕೊಂಡು ನಿಲ್ಲುವುದು ಅಸಂಭವವೇ ಎಂದು ನಾನು ಅವರ ಮನೆಗೆ ಹೋಗಲಿಲ್ಲ ನಮ್ಮ ಮನೆಯ ಹೊರಗಡೆಯಲ್ಲೇ ನಿಂತುಕೊಂಡೆ

ಇಂದು ನಮ್ಮ ಮನೆಯೆದುರಿನಿಂದ ಹೋಗುವಳು. ಅವಳನ್ನು ಕೊನೆಯ ದಾಗಿ ಒಮ್ಮೆ ನೋಡಬೇಕು, ಬಳಿಕ ಶೀಘ್ರವೇ ನನ್ನ ಗೋಪನದುರ್ಗದಲ್ಲಿ ಆಶ್ರಯ ಹೊಂದಬೇಕು ಎಂದು.

ತುಸು ಹೊತ್ತಿನಲ್ಲಿ ವರಕನ್ನೆಯರನ್ನು ಒಳಗಿಟ್ಟುಕೊಂಡು ಬಂಡಿ ಪತಿತ ಪಾವನರ ಅಂಗಳದ ಬಾಗಿಲಿಂದ ಹೊರಬಿದ್ದಿತು. ಬಂಡಿಯ ಕಿಡಿಕಿಬಾಗಿಲು ಗಳು ಕೊಂಚವೂ ಬಿರುಕಿಲ್ಲದಂತೆ ಮುಚ್ಚಿದ್ದವು. ಪೋಲಿಸ್-ಕೋರ್ಟಿ ನಿಂದ ಸೆರೆಮನೆಗೆ ಸಾಗಿರುವ ಸೆರೆಯಾಳಿನಂತೆ—ತನ್ನ ಬೆಳಕು, ನಲವು, ಒಲವು, ಹಾರಯಿಕೆ ಎಲ್ಲವನ್ನೂ ಹೊರಗೆಯೇ ತೊರೆದು ಅವಳು ದುಃಖದ ಕಗ್ಗತ್ತಲೆಯಲ್ಲಿ ಬಂದಿಯಾಗಿ ಹೋಗಿದ್ದಳು. ನನ್ನ ಕಣ್ಣೆದುರಿನಲ್ಲಿಯೆ ಇಂದುಲೇಖೆ ಅಸ್ತವನ್ನೈದಿದಳು; ಆದರೆ ನನಗೆ ಅವಳನ್ನು ಒಮ್ಮೆಯೂ ನೋಡುವುದು ಸಾಧ್ಯವಿಲ್ಲದೆ ಹೋಯಿತು

ಕೆಲದಿನಗಳ ಮೇಲೆ ಮನಸು ಸಿಕ್ಕಿದೆ, ಇಂದುವಿಗೆ ನಾನೊಂದು ಕಾಗದ ಬರೆದೆ. ಎಂದೂ ಬಾಯಿಂದ ಹೊರಡದಿದ್ದ ಪ್ರಣಯನಿವೇದನೆ ಪತ್ರದಲ್ಲಿಯೂ ಒಡಮೂಡಲಿಲ್ಲ. ಬರೀ ಒಂದು ಕುಶಲ ಪ್ರಶ್ನೆಯನ್ನು—ಅವಳ ಕೈಬರಹದ ಒಂದೇ ಒಂದು ಸಾಲನ್ನು ಪಡೆಯುವ ಹಂಬಲದಿಂದ—ಬರೆದು ಕೇಳಿದೆ. ಎಷ್ಟೋ ದಿನಗಳು ವ್ಯರ್ಥವಾಗಿ ಕಳೆದವು; ಇಂದುವಿನಿಂದ ಉತ್ತರದ ಕಾಗದ ಬರಲಿಲ್ಲ. ಇದ್ದಕಿದ್ದ ಹಾಗೆ ಒಂದು ದಿನ ಪತಿತಪಾವನ ಬಾಬುಗಳಿಂದ ನನಗೆ ಕರೆ ಬಂದಿತು; ಹೋದೆ. ಅವರು ಒಂದು ಪತ್ರವನ್ನು ನನ್ನ ಕೈಯಲ್ಲಿತ್ತು, "ಓದು" ಎಂದರು.

ನನಗೆ ಏನೊಂದೂ ತಿಳಿಯಲಿಲ್ಲ. ಅಂಜುತ್ತಂಜುತ್ತ ಲಕ್ಕೋಟೆ ಯೊಳಗಿನ ಕಾಗದವನ್ನು ಹೊರಗೆ ತೆಗೆದೆ. ನಾನು ಇಂದುವಿಗೆ ಬರೆದಿದ್ದ ಒಂದು ಸಾಲಿನ ಪತ್ರ. ನನ್ನ ಕಣ್ಣ ಮುಂದೆ ಕತ್ತಲೆ ಕವಿದಂತಾಯಿತು. ಕಾಗದ ಕೈಯಿಂದ ಜಾರಿ ಬಿದ್ದಿತು.

"ಓದು" ಪತಿತಪಾವನ ಬಾಬು ಮತ್ತೆಂದರು.

ಯಂತ್ರಚಾಲಿತನಂತೆ ಬಿದ್ದ ಕಾಗದವನ್ನು ಎತ್ತಿಕೊಂಡು ಓದಿದೆ. ಇಂದುಲೇಖೆಯ ಗಂಡ ಬರೆದಿದ್ದರು—"ಶ್ರೀಚರಣಗಳಲ್ಲಿ. ನಮ್ಮಾರೋ ಮನೋ

ಮೋಹನನಂತೆ, ನನ್ನ ಹೆಂಡತಿಗೆ ಕಾಗದ ಬರೆದಿದ್ದಾನೆ. ಆಕೆಯನ್ನು ಅಂದು ಅಡಿ ಹಿಡಿಸಿ ಕೇಳಿದೆ; ಅವನು ತಮ್ಮ ನೆರೆಹೊರೆಯವನೆಂದು ತಿಳಿಯಿತು. ಯುವಕನಂತೆ. ನನ್ನ ಹೆಂಡತಿಗೆ ಯಾವ ಪುರುಷನಾದರೂ ಕಾಗದ ಬರೆಯುವುದು ನನಗೆ ಸೇರುವುದಿಲ್ಲ, ತಡೆಯುವುದಿಲ್ಲ. ಆ ಮನುಷ್ಯನನ್ನು ಕರೆಸಿಕೊಂಡು ತಾವು ಸರಿಯಾಗಿ ತಿಳಿಹೇಳಿರಿ. ಮತ್ತೆ ಹೀಗೆ ಮಾಡಿದನೆಂದರೆ, ಅವನನ್ನು ಕಟ್ಟಳೆಗೆ ಗುರಿಪಡಿಸಬೇಕಾದೀತು. ಇತಿ—ಶ್ರೀತಾರಕೇಶ್ವರ ಸೇನ."

ಪತ್ರವನ್ನೋದಿ ನನಗೆನಿಸಿತು—ಇಂದುಲೇಖೆಯ ಗಂಡ ನ್ಯಾಯಾಧೀಶ ನಿಜ! ಪತ್ರವನ್ನು ಬರೆಯುವಾಗ ಈ ಬಗೆಯ ಪರಿಣಾಮವೂ ಸಂಭವನೀಯವೆಂದು ನಾನು ಬಗೆದಿರಲಿಲ್ಲ. ನಾನು ಅಪರಾಧಿಯಂತೆ ಭಯ ಲಜ್ಜೆಗಳಿಂದ ಅಭಿಭೂತನಾಗಿ, ಮೆಲ್ಲಮೆಲ್ಲನೆ ಕಾಗದಗಳೆರಡನ್ನೂ ಪತಿತಪಾವನ ಬಾಬುಗಳ ಮುಂದಿಟ್ಟು, ತಲೆತಗ್ಗಿಸಿಕೊಂಡು ತೀರ್ಪನ್ನು ಕೇಳಿಕೊಳ್ಳಲು ಸಿದ್ಧನಾಗಿ ನಿಂತುಕೊಂಡೆ. ಆ ಕಾಗದಗಳನ್ನು ಚೂರು ಚೂರಾಗಿ ಹರಿಯುತ್ತ ಪತಿತಪಾವನ ಬಾಬು ಮನದೊಳಗಿನ ಕೋಪ-ತಾಪಗಳನ್ನು ಕೈಯಿಂದ ಪ್ರದರ್ಶಿಸುತ್ತ, ಬಾಯಿಂದ ಗಂಭೀರವಾಗಿ ಬುದ್ಧಿವಾದ ಹೇಳಿದರು: "ಮನೋ, ಈ ನಿನ್ನ ಕೆಲಸ ಒಳ್ಳೆಯದಲ್ಲ. ಇಂದು ತನ್ನ ಗಂಡನ ಮನಃಕಷಾಯಕ್ಕೆ ಈಡಾಗಬೇಕಾಗುವುದು. ಇನ್ನೊಮ್ಮೆಂದೂ ಇಂತಹ ಕೆಲಸ ಮಾಡಬೇಡ. ತಾರಕನಿಗೆ ನಾನು ಕಾಗದ ಬರೆದು ಸಮಾಧಾನಪಡಿಸುವೆ."

ನಾನು ನಾಚಿಕೆಯಿಂದ ನಿಸ್ಸತ್ತ್ವನಾಗಿ ಮನೆಗೆ ಮರಳಿದೆ. ಹೀಗೆಯೇ ಲಜ್ಜೆಗೀಡಾದ ಜಾನಕೀದೇವಿ, ಭೂಮಾತೆಯನ್ನು ಇಬ್ಭಾಗವಾಗಿ ಹೊಟ್ಟೆಯಲ್ಲಿ ಹಾಕಿಕೊಳ್ಳೆಂದು ಮೊರೆಯಿಟ್ಟಿದ್ದಳು. ನನ್ನ ಕಿವಿಗಳಲ್ಲಿ ಕೇವಲವಾಗಿ 'ಇದರಿಂದ ಇಂದು ತನ್ನ ಗಂಡನಿಂದ ಅವಹೇಲನೆಗೀಡಾಗುವಳಲ್ಲ' ಎಂದು ಧ್ವನಿತವಾಗುತ್ತಲಿತ್ತು. ಹಾಯ್ ಹಾಯ್, ನನಗೇಕೆ ಅಂತಹ ದುರ್ಬುದ್ಧಿ ಹುಟ್ಟಿತೋ!

ಅದು ಇಂದು ಹನ್ನೊಂದು ವರುಷಗಳ ಹಳೆಯ ಮಾತು. ಆಮೇಲೆ ನಾನು ಬಿ ಏ. ಆಗಿ, ಎಂ ಏ, ಆದೆ. ಪತಿತಪಾವನ ಬಾಬು ಬಾಂಕಿಪುರದಿಂದ ಕಟಕಕ್ಕೆ ವರ್ಗವಾಗಿ ಹೋದರು. ನಮ್ಮ ಭಾವನ ಒತ್ತಾಯದ ಸಲಹೆಯನ್ನು ಅಲಕ್ಷಿಸಿ ವಕೀಲಿ ವೃತ್ತಿಯನ್ನು ಕೈಕೊಳ್ಳದೆ,— ಈಗೇಟು ವರುಷಗಳಾದವು—ಈ

ಇಂದುಲೇಖಾ ಪತ್ರಿಕೆಯನ್ನು ಹೊರಡಿಸಿ ನಡೆಸಿದ್ದೇನೆ. ರಾಮಚಂದ್ರನು ಬಂಗಾರದ ಸೀತಾಮೂರ್ತಿಯನ್ನು ಪ್ರತಿಷ್ಠೆ ಮಾಡಿದ್ದನಂತೆ; ನಾನು ಪಿತ್ರಾರ್ಜಿತವಾದ ಸೊತ್ತನ್ನೆಲ್ಲ ಮಾರಿ ಕಾಗದದ ಇಂದುಲೇಖೆಯನ್ನು ಪ್ರತಿಷ್ಠಿಸಿದ್ದೇನೆ. ನನ್ನ ವಿದ್ಯಾ-ಬುದ್ಧಿ-ಶಕ್ತಿ-ಅರ್ಥಗಳನ್ನೆಲ್ಲಾ ಇದರ ಸೇವೆಗೇ ಅರ್ಪಿಸಿದ್ದೇನೆ.

ಇಂದುಲೇಖೆಗೆ ಪತ್ರಿಕೆ ಓದುವುದೆಂದರೆ ಬಹಳ ಪ್ರೀತಿ. ಆಕೆಗೆ ಪತ್ರ ಬರೆಯುವ ಹಾದಿ ಕಟ್ಟಿದೊಡನೆ, ಯೋಚಿಸುತ್ತಿದ್ದಂತೆ ಈ ಸ್ಫೂರ್ತಿ ತಲೆಯಲ್ಲಿ ಬಂತು—ಅವಳ ಹೆಸರಿನ ಒಂದು ಪತ್ರಿಕೆಯನ್ನು ಹೊರಡಿಸಬೇಕು. ಅದರ ಹೃದಯದಲ್ಲಿ ನನ್ನ ಮರ್ಮಕಥೆಯನ್ನು ಬರೆಬರೆದು ದಿಕ್ಕುದಿಕ್ಕುಗಳಲ್ಲಿ ಹರಡುವಂತೆ ಮಾಡಬೇಕು; ಒಂದಿಲ್ಲೊಂದು ದಿನ ದೈವವಶಾತ್ ಇಂದು-ಲೇಖೆಯ ಕಣ್ಣಿಗಿದು ಬಿದ್ದೀತು! ಅಂದಿನಿಂದ—ಅವಳನ್ನೇ ಕೇಂದ್ರವಾಗಿರಿಸಿಕೊಂಡು ಸುತ್ತಲೂ ಹೊಸ ಹೊಸ ವಿಚಿತ್ರ ವೇದನೆಗಳ ಕತೆಗಳ ಜಾಳಿಗೆಯನ್ನು ಹೆಣೆಯುವುದು ನನ್ನ ಸಾಧನೆಯಾಯಿತು. ಭಕ್ತ ಪೂಜಾರಿಯಂತೆ ದೇವತೆಗೆ ಅರ್ಘ್ಯನೈವೇದ್ಯ ಅರ್ಪಿಸುತ್ತ ಬಂದೆ. ನನ್ನ ಪೂಜೆಯಿಂದ ದೇವತೆಯ ಆಸನ ಅಲುಗಾಡೀತೋ ಹೇಗೆಂಬುದನ್ನು ನಾನು ನೆನೆಯಲಿಲ್ಲ. ತ್ರಿಕರಣಪೂರ್ವಕವಾಗಿ ದುಡಿದು, ಇಂದುಲೇಖೆಯನ್ನು ಮನೆಮನೆಯಲ್ಲಿಯೂ ಆದರದ ಸ್ವಾಗತ ದೊರೆಯುವಂತೆ ಸುಂದರಗೊಳಿಸಬೇಕೆಂಬುದೇ ನನ್ನ ಹಂಬಲ. ಈ ರೀತಿ ಎಂದಾದರೊಮ್ಮೆ ನನ್ನ ಪೂಜೆಯ ಅರ್ಘ್ಯ ದೇವತೆಯ ಅಡಿಯಲ್ಲಿ ಬಿದ್ದರೂ ಬೀಳಬಹುದೆಂಬ ಕ್ಷೀಣ ಆಶೆಯೊಂದಿತ್ತು.

ನಡುನಡುವೆ ಒಮ್ಮೊಮ್ಮೆ ಮನಸ್ಸು ಬಹಳ ಬಳಲುವುದು; ಕೆಲಸದ ಹುರುಪು ಅಳಿಯುವುದು; ಎಲ್ಲಿಯೂ ಕೊಂಚವೂ ಆಸರೆ ಸಿಕ್ಕದಂತಾಗುವುದು. ಇಂದುಲೇಖೆ ನನ್ನ ನೆರೆಯವಳಾಗಿದ್ದಳು; ನಮ್ಮಿಬ್ಬರ ವಯಸ್ಸೂ ಚಿಕ್ಕದಾಗಿತ್ತು; ನಾನಾಗ ಅವಳ ನೆನಪಿನ ಯಾವ ಕುರುಹನ್ನೂ ಸಂಪಾದಿಸಿ ಇಟ್ಟುಕೊಳ್ಳಲಿಲ್ಲ; ಇಟ್ಟುಕೊಳ್ಳುವುದು ಅವಶ್ಯವೆಂದೂ ಎನಿಸಲಿಲ್ಲ. ಈಗ ಮಾತ್ರ ಆ ಅಭಾವದಿಂದ ನನ್ನ ಬದುಕೇ ಶೂನ್ಯವೆಂದೆನಿಸುತ್ತಿತ್ತು—ಆಕೆಯ ಕೈಬರೆಹದ ಒಂದು ಸಾಲಾದರೂ ನನ್ನ ಹತ್ತಿರ ಇದ್ದಿದ್ದರೆ!

ಮನಸಿನ ಚಡಪಡಿಕೆಯನ್ನು ಅದುಮಿಟ್ಟಷ್ಟು ಕೊನೆಗೆ ಒಂದು ದಿನ

ಅಕ್ಕನನ್ನು ಕೇಳಿದೆ: "ಅಕ್ಕಾ, ಇಂದು ಅವರ ಕಾಗದ ಗೀಗದ ಏನಾದರೂ ಬಂದಿದೆಯೆ?"

ಅವಳೆಂದಳು: "ಇಲ್ಲ. ಯಾರೆಲ್ಲಿದ್ದಾರೆಂಬುದೂ ತಿಳಿಯದು."

ಆದರೆ ಇಂದು ಎಲ್ಲಿದ್ದಾಳೆಂಬುದು ನನಗೆ ಗೊತ್ತಿತ್ತು. ಪ್ರತಿ ಸಲವೂ ಕಲಕತ್ತಾ ಗೆಜೆಟ್ ಓದಿ ಇಂದುಲೇಖೆಯ ಗಂಡನಿಗೆ ಎಲ್ಲಿಗೆ ವರ್ಗವಾಯಿತು ಎಂಬುದನ್ನು ತಿಳಿದುಕೊಳ್ಳುವುದು ನನ್ನ ಕರ್ತವ್ಯಗಳಲ್ಲಿ ಒಂದಾಗಿದ್ದಿತು. ಹಿಂದುಮುಂದು ನೋಡುತ್ತ ನಾನೆಂದೆ: "ಇಂದುವಿನ ಗಂಡ ಈಗ ಭಗವಾನಪುರದಲ್ಲಿದ್ದಾರೆ; ಆಕೆಗೊಂದು ಕಾಗದ ಬರೆಯಲ್ಲ!"

ಅಕ್ಕ ಮೂಗು ಮುರಿದಳು. "ಅವರು ಯಾರೂ ನಮ್ಮ ಸುದ್ದಿ ಸಮಾಚಾರ ವಿಚಾರಿಸುವುದಿಲ್ಲ. ನಾನು ಮುಂದೆ ಬಿದ್ದು ಕಾಗದ ಬರೆಯಲಾರೆ. ಏನು ಆಗತ್ಯ?"

ನನ್ನಿಂದ ಮತ್ತೇನನ್ನೂ ಹೇಳುವುದಕ್ಕಾಗಲಿಲ್ಲ. ಅವರು ನಿನ್ನನ್ನು ವಿಚಾರಿಸದಿದ್ದರಿಲ್ಲ, ನನಗೆ ಇಂದುವಿನ ಸಮಾಚಾರವನ್ನು ತಿಳಿದುಕೊಳ್ಳುವುದು ಅತ್ಯಂತ ಆಗತ್ಯ ಎಂದು ಅಕ್ಕನಿಗೆ ಹೇಗೆ ಹೇಳಲಿ? ಮನಸಿನಲ್ಲಿ ನಿರಾಸೆಯ ಹಾಹಾಕಾರವನ್ನು ತುಂಬಿಕೊಂಡು ಸಂತುಷ್ಟನಾಗಿಯೇ ಇರಬೇಕು ನಾನು; ನನ್ನ ದುಃಖ ಯಾರಿಗೂ ಹೇಳತಕ್ಕುದಲ್ಲ.

ಹಠಾತ್ ಒಂದು ದಿನ ನಮ್ಮ ಆಡಳಿತಗಾರ ಈ ಕಾಗದವನ್ನು ನನ್ನ ಕಡೆ ತಂದ. ನನ್ನ ಹತ್ತಿರ ಕೂಡಿಸಿಟ್ಟು, ಕೊಂಡಿದ್ದ ಪತ್ರಿಕೆಯ ಫಾರ್ಮು ಗಳನ್ನು ಬೇಡಿದ—ಅವನ್ನು ಕಳಿಸಿ ಇಂದುಲೇಖೆಯ ಕೊರತೆಯನ್ನು ತುಂಬು ವುದಕ್ಕಾಗಿ.

ಕಾಗದವನ್ನು ನೋಡಿ ಕ್ಷಣ ಹೊತ್ತು ನನ್ನ ವಾಕ್ಶಕ್ತಿಯೆ ಲುಪ್ತವಾಯಿತು. ಇದು ಇಂದುಲೇಖೆಯ ಬರೆಹ! ಅವಳು ನನ್ನ ಪತ್ರಿಕೆಯ ಚಂದಾದಾರಳು! ಯಾವಾಗಲೋ ಹೀಗೆಯೆ ಒಂದು ಕಾಗದವನ್ನು ಬರೆದು, ತನ್ನ ಹೆಸರಿನ ನನ್ನ ಪತ್ರಿಕೆಗೆ ಗ್ರಾಹಕಳಾಗಿದ್ದಾಳೆ ಅದು ನನಗೆ ಗೊತ್ತೇ ಇಲ್ಲ. ದುರ್ಲಭವಾದ ಆ ಕಾಗದ ನನ್ನ ಕಣ್ಣಿಗೇ ಬೀಳಲಿಲ್ಲ ಅದರ ಮಹತ್ವ ನಮ್ಮ ಆಡಳಿತಗಾರನ ದೃಷ್ಟಿಯಲ್ಲಿ ಎಷ್ಟು? ಅದರ ಎದೆಯಲ್ಲಿ ಕಬ್ಬಿಣ ಕಡ್ಡಿ

ಯನ್ನು ಚುಚ್ಚಿ ಫೈಲು ಮಾಡಿದ್ದಾನು; ಅಥವಾ ಬಹುಶಃ ಹರಿದು ಕಸದ ಬುಟ್ಟಿಗೆ ಚೆಲ್ಲಿದ್ದಾನು. ಈಗ ಹೊಲಿಯುವವರ ಕಣ್ತಪ್ಪಿನಿಂದಾಗಿ ಅವಳ ಇನ್ನೊಂದು ಪೋಸ್ಟ್‌ಕಾರ್ಡ್ ಬಂದಿತು. ಇಂದು ನನ್ನ ಸಾಧನೆ ಸಾರ್ಥಕ ವಾಯಿತು. ಇಂದು ನನ್ನ ಇಪ್ಪ ದಿನಗಳ ಪೂಜೆಯಿಂದ ಪ್ರಸನ್ನಳಾದ ದೇವತೆಯ ವರ ಸಿಕ್ಕಿದೆ. ಹೊಲಿಯುವವರ ತಪ್ಪಿಗಾಗಿ ನನ್ನ ಸರ್ವಸ್ವವನ್ನು ಮೆಚ್ಚು ಕೊಡಬೇಕೆನಿಸಿತು.

ನಾನು ನನ್ನ ಚಿತ್ತಚಾಂಚಲ್ಯವನ್ನು ಸಾವರಿಸಿಕೊಂಡು ವ್ಯವಸ್ಥಾಪಕ ನಿಗೆ ಹೇಳಿದೆ: "ಫಾರ್ಮುಗಳನ್ನು ಕಳಿಸುವುದು ಬೇಡ. ಬೇರೊಂದು ಒಳ್ಳೆಯ ಪ್ರತಿಯನ್ನು ನೋಡಿ, ಕಟ್ಟಿ ನನ್ನ ಕಡೆ ಕಳಿಸಿರಿ; ನಾನು ವಿಳಾಸವನ್ನು ಬರೆದು ಕೊಡುವೆ."

ಆ ದಿನದಿಂದ ೪೭೬೫ನೆಯ ಕ್ರಮಾಂಕದ ಗ್ರಾಹಕಳ ವಿಳಾಸವನ್ನು ನಾನೇ ಬರೆಯುತ್ತಿದ್ದೇನೆ! ಈ ಅಪರಿಚಿತಳಂತೆ ಬರೆದಿದ್ದ ವ್ಯವಹಾರದ ಪತ್ರವನ್ನು ನನ್ನ ಕಣ್ಣೆದುರಿನಲ್ಲಿ ಇರಿಸಿಕೊಂಡಿದ್ದೇನೆ!

# ಜೇಬ-ಉನ್ನೀಸಾ

೧

ಗುಜರಾತದ ನವಾಬ-ದರಬಾರಿನಲ್ಲಿ ಮಾಧವ ಮಿಶ್ರ ಆಸ್ಥಾನ ಕವಿ. ಜೇಬ-ಉನ್ನೀಸಾ ನವಾಬಜಾದೀ.

ಕವಿ ಆಸ್ಥಾನದಲ್ಲಿರುತ್ತಿದ್ದ; ಶಾಹಜಾದಿ ಇರುತ್ತಿದ್ದಳು ಒಳಗಡೆ. ಕವಿ ಓಲಗದಲ್ಲಿ ಹಾಡುತ್ತಿದ್ದ; ಶುಭ್ರ ಅಮೃತಶಿಲೆಯ ಜಾಳಿಗೆಯ ತೆರೆಯ ಹಿಂದೆ ಕುಳಿತು ಶಾಹಜಾದಿ ಕವಿಯ ಕಾವ್ಯವನ್ನು ಆಲಿಸುತ್ತಿದ್ದಳು; ತುಂಬಿದ ಓಲಗದಲ್ಲಿ ಕಾವ್ಯಛಂದದ ಯತಿತಾಲದಲ್ಲಿ ಕವಿಗೆ ಕೇಳುತ್ತಿತ್ತು, ಯಾರದೋ ಅಲಂಕಾರಗಳ ಝಣಿತ.

ಶಾಹಜಾದಿಯನ್ನು ಕಣ್ಣಿಂದ ಎಂದೂ ನೋಡಿದವನಲ್ಲ ಕವಿ ಯಾವಾಗಲಾದರೂ ಆಕೆಯ ಮಿರುಗುವ ಮೇಲುದಿನ ಕ್ಷೀಣಛಾಯೆ ಬಿಳಿಗಲ್ಲಿನ ಜಾಳಿಗೆಯೊಳಗಿಂದ- ಕಿರುನಗೆಯ ಹೊಳಹಿನಂತೆ ಹಣಿಕಿ ಹೋಗುವುದು; ಒಮ್ಮೊಮ್ಮೆ ಕೆಂಪು ಪೈಜಾಮಿನ ಪೆಂಪು ಕವಿಯ ಕಣ್ಣಲ್ಲಿ—ಮದ್ಯದ ಅಮಲಿನಂತೆ—ಮನೆ ಮಾಡುವುದು.

ಇಷ್ಟೇ ಬಂಡವಾಳ ಕವಿಗೆ; ಇಷ್ಟೇ ಪರಿಚಯ. ಈ ಛಾಯೆಯನ್ನೇ ಅವನು ಮೂರ್ತಿಯನ್ನಾಗಿ ಸೃಷ್ಟಿಸಿಕೊಂಡು ಯಾವಳೋ ಗೊತ್ತಿಲ್ಲದ ಮಾನಸಸುಂದರಿಯ ವಂದನಾಗೀತವನ್ನು ಹಾಡುವ. ಆಗ ಜಾಳಿಗೆಯಾಚೆಯಲ್ಲಿ ಯಾರದೋ ಜರತಾರಿಯ ಕಿಂಕಾಬಿನ ಉಡಿಗೆ ತೊಡಿಗೆ, ತನ್ನೊಳಗಡಗಿದ್ದ ವ್ಯಥಿತ ಹೃದಯದ ಕಾತರತೆಯ ಆಭಾಸವನ್ನು ಆತನ ಕಿವಿಯಲ್ಲಿ ಗುನುಗುವುದು.

ಆ ಕ್ಷಣದ ಸುಂದರಿಯನ್ನು ಕುರಿತು ಕವಿ ಹಾಡುವ—'ತನ್ನ ತನು-ಲತೆಯ ಅಪ್ಪುಗೆಯಿಂದ ಜರಿಯ ಕಿಂಕಾಬನ್ನು ಧನ್ಯಗೊಳಿಸುವವಳೇ ಸುಂದರಿ. ಬಂಗಾರದ ತಬಕದಲ್ಲಿಟ್ಟಿದ್ದ ಸವನೂರಂಬಾಡಿ ಎಲೆಯ ವೀಟಿಕೆಯಂತೆ ಅಂತ ರಾಳದಲ್ಲಿ ರಸಧಾರೆಯುಳ್ಳಾಕೆ; ಆ ರೂಪಸಿಯ ರಸರೂಪವನ್ನು ಅನುಭವಿಸ ದವರು ವಂಚಿತರೇ ಸರಿ. ಓ ವಿಭೂಷಿತೇ, ನನ್ನ ಈ ವಂದನಾಗೀತವು ನಿನ್ನ ಭೂಷಣದ್ಯುತಿಯನ್ನು ಉಜ್ವಲತರವಾಗಿ ಮಾಡಲಿ.'

ಆ ಹಾಡನ್ನು ಮನವಾರೆ ಕೇಳಿ ಶಾಹಜಾದಿ ಮನದೊಳಗೆ ಎಂದು ಕೊಳ್ಳುವಳು—'ಸರಿಯಾಗಿ ಹೇಳಿದೆ ಕವಿಯೆ, ಸರಿಯಾಗಿ ಹೇಳಿದೆ. ನಾನು ಬಂಗಾರಪಾತ್ರದೊಳಗಿಟ್ಟ ವೀಟಿಕೆ. ನನ್ನ ಹೊರಗು ಮಿಸುನಿಯ ಮಿರುಗನ್ನು ಳ್ಳುದು, ಒಳಗು ಸಿರಾಸೆಯ ಶೋಣಿತರಸವೂ ಯ!'

ಶಾಹಜಾದಿ ಭಾವನಾಮಯಳಾಗಿ—ಬಿಳಿತಾವರೆಗೆರಗುವ ತುಂಬಿ ಗಳಂತೆ—ಅಮೃತಶಿಲೆಯ ಜಾಳಿಗೆಯ ಕಿಂಡಿಯಲ್ಲಿ ತನ್ನ ಕಪ್ಪಾದ ಕಣ್ಣುಗಳ ನ್ನಿರಿಸಿ ಹೊರಕ್ಕೆ ನೋಟವನ್ನು ಬೀರುವಳು—ಸುಗೌರ ಸುಂದರ ಕವಿ ಕೈಗಳೆ ರಡನ್ನೂ ಕುಣಿಸುತ್ತ ಹಾಡುತ್ತಿರುವ. ಎಂತಹ ತೇಜ!

ನೋಡುತ್ತ ನೋಡುತ್ತ ನವಾಬಜಾದಿ ಕರವಸ್ತ್ರದಿಂದ ಕಣ್ಣುಗಳನ್ನೊ-ರಸಿಕೊಳ್ಳುವಳು. ಆ ವಸ್ತ್ರದ ಗುಲಾಬಿಯ ಸವಿಗಂಪು ಓಲಗದಲ್ಲೆಲ್ಲ ಪಸ ರಿಸುವುದು. ಕವಿಯ ಪ್ರಾಣವನ್ನು ಮದಿರಾವೇಶ ಆವರಿಸುವುದು. ಚಾಂಚಲ್ಯ ದಿಂದ ಆತನ ಚೇತನೆ ಶಿಥಿಲವಾಗುವುದು; ಕೊರಲು ಗದ್ಗದವಾಗುವುದು. ಓಲಗದವರೆಲ್ಲ 'ಸೊಗಸು, ಏನು ಸೊಗಸು' ಎನ್ನುವರು. ಈ ಹೊಗಳಿಕೆ ಕವಿಯ ಕಿವಿಗಳನ್ನು ಸೇರುತ್ತಿತ್ತೋ ಇಲ್ಲವೋ, ಹಿಂದುಗಡೆಯಿದ್ದ ಶಾಹಜಾದಿಯ ಹೃದಯ ಮಾತ್ರ ಅದನ್ನು ಕೇಳಿ ನಲಿಯುತ್ತಿತ್ತು.

೨

ಹೀಗೆಯೆ ನಾಳೆಯ ದಿನಗಳು ಬಂದು ಬಂದು ನಿನ್ನೆಗೆ ಸರಿಯುತ್ತಿದ್ದವು. ಓಲಗದ ಜನ ರಾಜಕಾರಣದ ಚಕ್ರದಿಂದೊಮ್ಮೆ ಬಿಡುವು ಹೊಂದಿ ಕಾವ್ಯ ಶ್ರವಣದಲ್ಲಿ ಮೈಮರೆಯುವರು. ಎಲ್ಲಿ ಯಾವ ಹೃದಯತಲದಲ್ಲಿ ಎಂತಹ ವೇದನೆ ಕೂಡುಬೀಳುತ್ತಿದೆಯೆಂಬ ಅರಿವು ಆ ಆನಂದವಿಹ್ವಲರಿಗಿರಲಿಲ್ಲ.

ಮತ್ತೆ ಕವಿ ? ಅವನು ತನ್ನ ತರಲಕಲ್ಪನೆಯಲ್ಲಿ ಕಾಣದ ಮೂರ್ತಿಗೆ ವಾಗಮೃತದಿಂದ ಅಭಿಷೇಕಮಾಡುತ್ತಿದ್ದ; ಆಕೆಯ ರೂಪವಹ್ನಿಯಲ್ಲಿ ತನ್ನ ಕವಿತ್ವವನ್ನು ಆಹುತಿಗೊಡುತ್ತಿದ್ದ; ಆದರೆ ಆ ಮೂರ್ತಿಯೊಳಗಿನ ಜೀವ ಒಳಗೊಳಗೇ ಬೆಂದು ಬತ್ತಿ ಒಣಗುತ್ತಿರುವುದನ್ನು ಅವನರಿಯ. ಅವನು ತನ್ನ ಹೃದಯದಲ್ಲಿಯ ಕವಿತ್ವದ ರಸಧಾರೆಯೆಲ್ಲವನ್ನೂ ಆ ಮಾನಸಸುಂದರಿಯ ಅಡಿಗಳಿಗೆರೆಯುತ್ತಿದ್ದನಷ್ಟೆ; ಇನ್ನೊಬ್ಬರು ಅದನ್ನು ತನ್ನದೆಂಬ ಭಾವನೆಯಿಂದ ತನ್ನ ಹೃದಯದಲ್ಲಿ ಸಂಗ್ರಹಿಸಿಕೊಳ್ಳುತ್ತಿರುವುದು ಕವಿಗೆ ತಿಳಿಯದು.

ಒಂದು ದಿನ, ಲತಾಕುಂಜಗಳ ಮಧ್ಯದಲ್ಲಿದ್ದ ತನ್ನ ಕುಟೀರದಲ್ಲಿ ಕುಳಿತು ಹೊಸ ಕವನವೊಂದನ್ನು ಕಟ್ಟುತ್ತಿದ್ದ ಕವಿ. ಆಗ ದರಿಯಾಬಿಬಿ, ಶಾಹಜಾದಿಯ ಆಪ್ತದಾಸಿ ಬಂದು ಅವನಿಗೆ ಅಭಿವಂದಿಸಿದಳು "ಏನು ದರಿಯಾಬಿಬಿ, ಬಡವರ ಮನೆಗೆ ಏಕೆ ಬರೋಣವಾಯಿತು ?" ಕವಿ ಕೇಳಿದ.

"ಸುದ್ದಿಯಿದೆ ಕವಿಗಳೇ, ಸುದ್ದಿಯಿದೆ." ಎನ್ನುತ್ತ ದರಿಯಾಬಿಬಿ ಇಡೀ ವೈಯನ್ನು ಬಳ್ಳಿಯಂತೆ ತೂಗುತ್ತ, ಕವಿಯೆದುರು ಹಸ್ತವನ್ನು ನೀಡಿದಳು.

ಜರಿ ಕೆಚ್ಚಿದ ಕರವಸ್ತ್ರವನ್ನು ಮುಚ್ಚಿಕೊಂಡು ಅವಳು ತಂದುದೇನು ? ಕವಿ ವಸ್ತ್ರವನ್ನು ತೆರೆದು ನೋಡಿದ—ಬಂಗಾರದ ತಬಕದಲ್ಲಿ ಒಂದು ವೀಟಿಕೆ.

"ಕವಿಗಳಿಗೆ ಬಾದಶಾಜಾದಿಯ ಕಾಣಿಕೆ." ದರಿಯಾಬಿಬಿ ನಿವೇದಿಸಿದಳು.

ವಿಹ್ವಲನಾದ ಕವಿಗೆ ಎಲ್ಲವೂ ಹೊಳೆಯಿತು. ತನ್ನ ಮನೋರಂಜನೆಗಾಗಿ ಒಬ್ಬರ ಮನೆಗೆ ಕೊಳ್ಳಿಯಿಟ್ಟು ತನ್ನ ಹಾದಿಗೆ ಬೆಳಕುಮಾಡಿಕೊಳ್ಳುತ್ತಿದ್ದೇನೆಂದು ಬಗೆದು ಅವನ ಹೃದಯ ಅತ್ಯಂತ ವ್ಯಾಕುಲಗೊಂಡಿತು. ವ್ಯಥೆಯಿಂದ ವಿಷಣ್ಣನಾಗಿ ಅವನು ಮಾತನಾಡಿದ: "ನೋಡು ದರಿಯಾ, ನಾನು ಬಾದಶಾಜಾದಿಯ ದಾಸ; ನಾನು ಆಕೆಯ ಗುಣಗಳನ್ನು ಕೊಂಡಾಡಿದೆ, ರೂಪವನ್ನು ಬಣ್ಣಿಸಿದೆ; ಅದರಲ್ಲಿಯೇ ನನಗೆ ತೃಪ್ತಿ, ಮತ್ತೇನೂ ನನಗೆ ಬೇಕಿಲ್ಲ. ಬಾದಶಾಜಾದಿಯ ಪ್ರಣಯದಾನಕ್ಕೆ ನಾನು ಪಾತ್ರನಲ್ಲ."

ಕವಿಯ ಉತ್ತರವನ್ನು ಕೇಳಿ ವ್ಯಥಿತಳಾದ ದರಿಯಾಬಿಬಿ ನಿಟ್ಟುಸಿರು ಕರೆದು ಹೊರಟುಹೋದಳು.

೩

ಮರುದಿನ ಓಲಗದಲ್ಲಿ ಕವಿ ಕಾವ್ಯಗಾಯನದಿಂದ ಜನರನ್ನು ತಣಿಸ ಲಿಲ್ಲ. ವಂದಿಸಿ ನೀರವವಾಗಿ ನಿಂತುಕೊಂಡ.

" ಏನು ಕವಿಗಳೇ, ನಿಮ್ಮ ಅಭ್ಯರ್ಥನೆಯೇನು ? " ನವಾಬನು ಕೇಳಿದ.

" ಜಹಾಪನಾ, ಕೆಲವು ದಿನ ನನಗೆ ಬಿಡುವು ಬೇಕಾಗಿದೆ " ತಲೆವಾಗಿ ಕವಿ ಕೇಳಿಕೊಂಡ.

" ಈ ಅರ್ಧಗಾಲದಲ್ಲಿ ಬಿಡವೇಕೆ? ವಸಂತರ್ತು ಇದೀಗ ಅಡಿಯಿಡುತ್ತ ಲಿದೆ. ಕಾವ್ಯರಸದಿಂದ ಓಲಗವನ್ನು ತಣಿಸುವುದಿಲ್ಲವೆ ? ಈ ಹೊತ್ತಿನಲ್ಲಿ ಬಿಡುವು ಬೇಕಾಯಿತೆ ? ಏನು ಸಮಾಚಾರ ? "

" ಜೀಯಾ, ನನ್ನ ರಸದ ಬಂಡವಾಳ ಸಾಲವಾಗಿ ತಂದದ್ದು. ಇನ್ನು ನನ್ನದೇ ಆದ ಒಂದು ಭಂಡಾರವಿಲ್ಲದೆ ಕಾವ್ಯರಚನೆಯ ವ್ಯವಸಾಯ ಸಾಗು ವಂತಿಲ್ಲ. ನಾನು ಮದುವೆಯಾಗುವೆ "

ಕೌತುಕದ ಹಾಸ್ಯದಿಂದ ನವಾಬನ ಮುಖವು ಉಜ್ವಲವಾಯಿತು. ಇಡೀ ಸಭೆಯ ಕೌತುಕ ದೃಷ್ಟಿಗಳು ಲಜ್ಜೆಯಿಂದ ಬಾಗಿದ ತರುಣ ಕವಿಯನ್ನು ಅಭಿನಂದಿಸಿದವು.

" ಆ ಭಾಗ್ಯವತಿ ಯಾರು ? ನಮ್ಮ ಓಲಗದ ಕವಿಯ ರಸದ ಬುಗ್ಗೆ ಯಾಗುವವರು ಯಾರವರು ? " ನವಾಬನು ಸವಿನಗೆಯೊಡನೆ ಪ್ರಶ್ನಿಸಿದ.

ಓಲಗದವರೆಲ್ಲ ಉಸಿರಾಟವನ್ನು ಮರೆತು ಕವಿಯ ಕಡೆ ನೋಡತೊಡಗಿ ದರು. ಕವಿ ಏನು ಹೇಳುವನೊ ! ಜಾಳಿಗೆಯ ಸಂದಿಯಿಂದ ಕತ್ತುರಿಯ ಕಂಪಿನ ಯಾರ ನಿಃಶ್ವಾಸವೊ,—ಆಕುಲಪ್ರತೀಕ್ಷೆಯಿಂದ, ಆಸೆ ಭಯಗಳಿಂದ- ಕವಿಯ ಕಿವಿಗಳಲ್ಲಿ ಹೊಕ್ಕು ಹೊಕ್ಕು ಹೊರಡತೊಡಗಿತು.

" ಜಹಾಪನಾ, ಆಕೆ ನನಗೆ ತಕ್ಕವಳೇ; ಬಡ ಹಳ್ಳಿಯ ಹೆಣ್ಣು. ಇದಕ್ಕೂ ಹೆಚ್ಚಿಗೆ ಹೇಳತಕ್ಕುದೇನೂ ಇಲ್ಲ ಅವಳಲ್ಲಿ." ಎಂದ ಕವಿ.

" ಭಾಪು ಕವಿಯೆ, ಅಂತರಂಗದ ಪರಿಪೂರ್ಣತೆ ನಿಮ್ಮ ಬಹಿರಂಗದ

ರಿಕ್ತತೆಯನ್ನು ತುಂಬುವುದು. ಇಂದಿನೀ ಸುದ್ದಿಯನ್ನು ಕೇಳಿ ನಮಗೆ ಸಂತೋಷವಾಯಿತು. ”

ಸಭೆಯೂ ಆನಂದದಿಂದ ಕವಿಯನ್ನು ಅಭಿನಂದಿಸಿತು. ಜಾಳಿಗೆಯ ಹಿಂದಿನಿಂದ ಯಾವಳೋ ರೂಪಸಿಯ ನೊಂದೆದೆಯ ಬಿಸಿಯುಸಿರು ಕವಿಯ ಕಿವಿಯಲ್ಲಿ ಸೂಜಿಯಂತೆ ಚುಚ್ಚಿದುದನ್ನು ಯಾರು ಬಲ್ಲರು ?—ಯಾರವೋ ಎರಡು ಕಪ್ಪು ಕಣ್ಣುಗಳು, ತಳಮಳಿಸುವ ಜೀವದಿಂದ ಹೊರಟ ಕರುಣಕಾತರ ದೃಷ್ಟಿಯನ್ನು ತನ್ನ ಬೆನ್ನಿಗೆಸೆಯುವಂತೆ ಕವಿಗೆನಿಸಿತು ಅದು ಯಾರಿಗೆ ಗೊತ್ತಾಯಿತು ? ಕೇಶರಗೆಂಪಿನ ಯಾರ ತುಟಿಗಳೋ ವ್ಯಥಿತ ಅಭಿಮಾನ ದಿಂದ ಕಂಪಿಸುತ್ತಿವೆ, ಯಾರ ಕ್ಷುಬ್ಧ ಹೃದಯವೋ ಕುಪ್ಪುಸದ ಬಂಧನ ವನ್ನು ಹರಿಯಲು ಹವಣಿಸುತ್ತಿದೆ, ಎಂದು ಕವಿಗೆ ಭಾಸವಾಯಿತು.

ಈ ಅನುಭವ ಕವಿಯನ್ನು ಸಂಕುಚಿತಗೊಳಿಸತೊಡಗಿತು; ಎಲ್ಲಿ ಯಾದರೂ ಮುಖ ಮರೆಯಿಸಿಕೊಳ್ಳಬೇಕೆಂದು ಅವನಿಗಿಚ್ಛೆಯಾಯಿತು ನವಾ ಬನು ಕವಿಯ ಬಿಡುವಿನ ಬೇಡಿಕೆಯನ್ನು ಒಪ್ಪಿದ ಓಲಗ ಹರಿಯಿತು. ಕವಿಗೆ ಸಾಕಪ್ಪ ಪಾರಾದೆನೆಂದು ಸಮಾಧಾನವಾಯಿತು. ಆದರೆ ಒಳಮನೆಯಲ್ಲಿಯ ಯಾರ ಅಡಿ ಸದ್ದೋ ಪರಿಣಯೋತ್ಸುಕನಾದ ಕವಿಯ ಕಿವಿಯಲ್ಲಿ ಕಾತರತೆ ಯಿಂದ ಏನನ್ನೋ ಗೊಣಗಿಹೋಯಿತು.

ಮನೆಗೆ ಹೋಗಿ ಕವಿ ಹೊರಡುವ ಏರ್ಪಾಡಿನಲ್ಲಿ ತೊಡಗಿದ್ದ. ದರಿಯಾ ಬಿಬಿ ಮತ್ತೆ ಅವನ ಗುಡಿಸಲಿಗೆ ಹೋದಳು. ಅವನಿಗೆ ನೀರವವಾಗಿ ಗಂಭೀರ ಭಾವದಿಂದ ವಂದಿಸಿದಳು. ಅವಳನ್ನು ಕಂಡು ಕವಿಯ ಮೋರೆ ಒಣಗಿ ಸಂಡಿಗೆ ಯಾಯಿತು; ಎದೆ ತತ್ತರಿಸಿತು. ಅವನು ತನ್ನ ಹೃದಯದ ವೇದನೆಯನ್ನು ಕತ್ತಿಟ್ಟು, ಮಾತಿನಲ್ಲಿ ವಿನೋದವನ್ನು ತರಲು ಪ್ರಯತ್ನಿಸಿದ.

“ ಏನಮ್ಮಾ ದರಿಯಾ, ಈ ಅಡ್ಡಹೊತ್ತಿನಲ್ಲಿ ಈ ಬಡವನ ಗುಡಿಸಲಿಗೆ ಮತ್ತೆ ಯಾವ ಸೊಗಸಿನ ಸಂದೇಶವನ್ನು ತಂದೆ ? ”

ಇಂದು ದರಿಯಾ ಹಿಂದಿನಂತಿರಲಿಲ್ಲ, ಅತ್ಯಂತ ಗಂಭೀರೆ. ಉದಾಸೀನತೆ ಯಿಂದ ಉತ್ತರವಿತ್ತಳು. “ ಸೊಗಸಿಲ್ಲ ಮಿರ್ಜಾಜೀ. ಎದೆಯೊಡೆಯುವಂತಹ ರಕ್ತರಂಜಿತವಾದ ಕೊಲೆಯ ಸುದ್ದಿಯನ್ನು ತಂದಿದ್ದೇನೆ ! ”

ದರಿಯಾ ತನ್ನೆರಡು ಕೈಗಳನ್ನೂ ಮುಂದೆ ಮಾಡಿದಳು ಇಂದು ಕೆಂಪು

ಬಟ್ಟೆಯಿಂದ ಮುಚ್ಚಿ ತಂದಿರುವುದು ಮತ್ತೇನು ?—ಕವಿಗೆ ನೋಡಬೇಕೆಂಬ ಕುತೂಹಲವಿಲ್ಲ; ವಸ್ತ್ರವನ್ನೆತ್ತಲು ಕೈಗೆ ತ್ರಾಣ ಬರಲಿಲ್ಲ; ನಿಶ್ಚಲನಾಗಿ ನಿರ್ವಾಹಕ್ಕಾಗಿ ನಿಂತುಬಿಟ್ಟ.

ದರಿಯಾ ತಾನೇ ವಸ್ತ್ರವನ್ನು ತೆಗೆದಳು.

ಮಣ್ಣಿನ ಹರಿವಾಣದಲ್ಲಿ ವೀಳಯ—ಅದರ ಒಡಲಲ್ಲಿ ಅಲಗು ನಟ್ಟಿದೆ; ಸೀಳಿ ಒಳಗಿಂದ ನೆತ್ತರು ಹರಿಯುತ್ತಿದೆ.

ಕವಿ ಕಂಬನಿ ಮಿಡಿಯುತ್ತ ಆ ಸ್ಥಳದಿಂದ ತೊಲಗಿ ಹೋದ.

೪

ನವಾಬನ ಓಲಗ ಸೇರಿದೆ ಕವಿ ಮದುವೆ ಮಾಡಿಕೊಂಡು ಮರಳಿ ಬಂದಿದ್ದಾನೆ.

"ಕವಿಯೆ, ಇಂದು ನಿನ್ನ ಹೊಸ ರಸದ ಭಂಡಾರವನ್ನೊಡೆಯು, ಹೊಸ ಹಾಡನ್ನು ಹಾಡು." ಎಂದು ನವಾಬನು ನುಡಿದ.

ಕವಿ ಹಾಡಿದ: 'ಒಡವೆಗಳನ್ನು ಬೇಡದ, ಹುಟ್ಟು ಚೆಲುವಾದ ರೂಪೇ ರೂಪು ಕಮಲಿನಿಗೆ ಮುತ್ತುಕೆಚ್ಚಿದ ಹೊನ್ನುಡುಗೆ ಬೇಕಾಗಿಲ್ಲ ಒಡವೆ ರೂಪನ್ನು ಅಡಗಿಸಿಡುವುದು; ಚೆಲುವಿನ ಜೀವಕಳೆಯನ್ನು ಕಡಿಸಿಬಿಡುವುದು'

ಆ ದಿನದಿಂದ ಹಾಡುವಾಗ ಕವಿಯ ಮನದೊಳಗೆ—ತೊಡವುಗಳಿಲ್ಲದ, ಮುಗುಳುನಗೆಯಿಂದ ಕಂಗೊಳಿಸುವ ಮೂರುತಿಯೊಂದು ಒಡಮೂಡಿರುವುದು. ಕವಿ ಭಾವತನ್ಮಯನಾಗಿ ಹಾಡುತ್ತಿದ್ದ. ದೇವರ ಪೂಜೆಯಿಂದ ಭಕ್ತನಿಗಾಗುವ ಆನಂದವನ್ನು ಕವಿ ಅನುಭವಿಸಿ ವಿಹ್ವಲನಾಗಿ ಮೈಮರೆಯುವ. ಅವನ ಹಾಡಿನಲ್ಲಿ ವಿಲಾಸದ ಹೆಚ್ಚಳವಿಲ್ಲ, ಐಶ್ವರ್ಯದ ವೈಭವವಿಲ್ಲ; ತಾಪಸ ಕನ್ಯೆಯಂತೆ ರಿಕ್ತ-ಶುದ್ಧ-ಶುಚಿಯಾದುದು ಈ ಕವನ ಕವಿ ಈ ಏಕಮಾತ್ರ ಅನಾಸ್ವಾದಿತ ನೂತನ ಆನಂದದಲ್ಲಿ ವಿಲೀನನಾಗಿರುತ್ತಿದ್ದ. ಎಲ್ಲಿಯಾದರೂ ಯಾರ ಹೃದಯಕ್ಕಾದರೂ ನೋವಾಗುತ್ತಿದ್ದೀತು, ತನ್ನ ಹಿಂದಿನ ಹಾಡನ್ನೂ ಇಂದಿನ ಹಾಡನ್ನೂ ತೂಗಿ ನೋಡುವ ಯಾರ ಮನಕ್ಕೋ ತನ್ನೀ ಹಾಡು ವಿಷಮವಾಗಿ ತೋರುತ್ತಿದ್ದೀತು ಎಂಬ ಅರಿವೂ ಅವನಿಗಿರಲಿಲ್ಲ.

ಕವಿಯ ಹೊಸ ಹಾಡನ್ನು ಕೇಳಿ ನವಾಬಜಾದಿಯ ಮೈಮೇಲಿನ ಒಡವೆಗಳು ಆಕೆಯನ್ನು ನಾಚಿಕೆಗೀಡುಮಾಡುತ್ತಿದ್ದವು; ಹೀಯಾಳಿಸುತ್ತಿದ್ದವು. ನಿರಾಭರಣೆಯಾದ ಅಪರಿಚಿತೆಯ ಆ ಅಭಿನವ ಮೂರ್ತಿಯನ್ನು ನೋಡುವುದಕ್ಕೆ ಅವಳ ಮನಸು ವ್ಯಾಕುಲವಾಗುವುದು. ಕವಿಯಿಂದು ಯಾವ ಸುಂದರಿಯನ್ನು ಒಣ್ಣಿಸುತ್ತಿದ್ದಾನೆ, ಇಷ್ಟೊಂದು ವೈಮರಿತು ? ಎಣೆಯಿಲ್ಲದ ವಿಲಾಸದಲ್ಲಿ ಹುಟ್ಟಿ, ಅದರಲ್ಲಿಯೆ ಬೆಳೆದು ಬಾಳಿದ ಬಾದಶಾಜಾದಿಗೆ, 'ಒಡವೆ ಇಲ್ಲದೆ ಚೆಲುವಿಕೆಯುಂಟೆ? ಅದು ಹೇಗಿರಬಹುದು ?' ಎಂದು ತಿಳಿಯದು. ಕವಿ ಹೃದಯವನ್ನು ಮುಗ್ಧಗೊಳಿಸಿದ ಆ ಸೌಭಾಗ್ಯವತಿ ಹೇಗಿರುವಳೋ! ಬಾದಶಾಜಾದಿಯ ಐಶ್ವರ್ಯ ಯಾವ ಹೃದಯವನ್ನು ಗೆಲ್ಲಲು ಹೋಗಿ ಸೋತು ಹಿಂದಿರುಗಿತ್ತೋ, ಆ ಹೃದಯವನ್ನು ಪಣವಿಲ್ಲದೆ ಗೆದ್ದಿರುವ ಅವಳು ಹೇಗಿದ್ದಾಳೋ ಯಾರು ಬಲ್ಲರು! ಬಾದಶಾಜಾದಿಯ ಸಕಲ ಭೂಷಣಗಳನ್ನಿತ್ತು ಹಳ್ಳಿಕನ್ನೆಯೊಬ್ಬಳ ಆ ಸೌಭಾಗ್ಯವನ್ನು ವಿನಿಮಯವಾಗಿ ಪಡೆಯುವುದು ಸಾಧ್ಯವಿದ್ದಿದ್ದರೆ!

೫

ವಸಂತಕಾಲ. ಪ್ರಕೃತಿಯ ರಾಜಭಂಡಾರ ನವೀನ ಐಶ್ವರ್ಯದಿಂದ ಪರಿಪೂರ್ಣವಾಗಿದೆ. ವಸಂತದ ಮೋಹನ ಸ್ಪರ್ಶದ ಆನಂದವು, ಕೊರಡನ್ನು ಸೀಳಿಕೊಂಡು ಚಿಗುರು-ತಳಿರು-ಹೂಗಳಲ್ಲಿ ವೈದೋರಿ ನಿಂತಿದೆ ಆ ಸೊಬಗು ಮನುಷ್ಯನ ಹೃದಯವನ್ನು ಅಧೀರಗೊಳಿಸಿದೆ ದೇಶದ ನರನಾರಿಯರೆಲ್ಲ ವಾರ್ಷಿಕ ವನಭೋಜನದ ಉತ್ಸವದ ಸಿದ್ಧತೆಯಲ್ಲಿಯೇ ಮುಳುಗಿಟ್ಟಿದ್ದಾರೆ. ತರುಣ-ತರುಣಿಯರ ಕಲಹಾಸ್ಯದಿಂದ ಬನಗಳು ನಿನದಿತವಾಗಿವೆ; ಪ್ರಣಯೀ-ಪ್ರಣಯಿನಿಯರ ಮಿಲನಾನಂದದಿಂದ ಕುಂಜಗಳು ಪುಲಕಿತವಾಗಿವೆ.

ಕವಿಪ್ರಿಯೆ ತಮ್ಮ ನವದಾಂಪತ್ಯದ ಅಮಿತ ಆನಂದದಲ್ಲಿ ವನಭೋಜನದ ಉತ್ಸವಕ್ಕಾಗಿ ತುಂಬಿದ ಮನದಿಂದ ಏರ್ಪಾಡು ನಡೆಸಿದ್ದಾಳೆ

ಕನಸು-ಮನಸಿನಲ್ಲಿಲ್ಲದೆ ಒಂದು ದಿನ, ಬಾದಶಾಜಾದಿಯ ಅಚ್ಚೊತ್ತಿದ ಕೇಶರಬಣ್ಣದ ಲಕ್ಕೋಟೆಯೊಂದು ಅವಳಿಗೆ ಬಂದಿತು. ಏಕೋ, ಏನಿದೆಯೋ

ಎಂದು ಅಂಜಂಜುತ್ತ ಅದನ್ನೊಡೆದು, ಕವಿಪ್ರಿಯೆ ಓದಿದಳು. ಅದೊಂದು ರಹಸ್ಯಮಯವಾದ ಚಿಕ್ಕ ಓಲೆ.

“ ಪರಮ ಸೌಭಾಗ್ಯವತೀ ಸೋದರಿ, ನಿಮ್ಮವಾತ್ಸರಿಕ ವನಭೋಜನದ ಹಬ್ಬದಲ್ಲಿ ನನಗೆ ತಮ್ಮಲ್ಲಿ ಔತನ—ಇತಿ ಹತಭಾಗಿನೀ ಜೇಬ-ಉನ್ನೀಸಾ.”

ಇದೇನು ವಿನೋದ ! ಬಾದಶಾಜಾದಿ ಬೇಡಿ ಔತಣ ಹೇಳಿಸಿಕೊಳ್ಳುತ್ತಿದ್ದಾಳೆ, ಹಳ್ಳಿಯ ಹೆಂಗುಸಿನಿಂದ ! ಕವಿಪ್ರಿಯೆಗೆ ತುಂಬಾ ನಗು ಬಂದಿತು. ಕವಿಯನ್ನು ಮಾತ್ರ ವಿಷಣ್ಣತೆಯಾವರಿಸಿತು.

ಮಾವಿನ ತೋಪಿನಲ್ಲಿ ಇಂದು ಬಾದಶಾಜಾದಿ ಕವಿಪ್ರಿಯೆಯ ಅತಿಥಿ. ಕವಿಪ್ರಿಯೆ ಸೆರಗನ್ನು ಸೊಂಟಕ್ಕೆ ಬಿಗಿದುಕೊಂಡು ಆತಿಥಿ ಸೇವೆಯಲ್ಲಿ ಮಗ್ನಳಾಗಿದ್ದಳು. ವಿವಿಧ ಖಾದ್ಯಗಳನ್ನು ಸ್ವಹಸ್ತದಿಂದ ಆಸ್ಥೆಯಿಂದ ಸಿದ್ಧಗೊಳಿಸುತ್ತಿದ್ದಳು. ಬಾದಶಾಜಾದಿ ದೂರದಲ್ಲಿ ಕುಳಿತು ಅವಳ ಲೀಲಾಭಂಗಿಯನ್ನು ನಗುತ್ತ ನೋಡುತ್ತಿದ್ದಳು. ದಿನವೆಲ್ಲ ಮಳೆಯಾದ ಬಳಿಕ ಹೊರ ಬಂದ ಸಂಜೆಯ ಬಿಸಿಲಿನಂತಿತ್ತು ನವಾಬಜಾದಿಯ ನಗೆ. ಆ ನಗೆಯ ಮುಂದೆ ಕವಿಪ್ರಿಯೆಯ ತುಂಬಿದೆದೆಯ ಉಕ್ಕುವ ಉಲ್ಲಾಸ ಬೆಳಗಿನ ಬಿಸಿಲಿನಂತೆ ಉಜ್ವಲವಾಗಿತ್ತು. ಬಾದಶಾಜಾದಿಯ ದೃಷ್ಟಿಯಲ್ಲಿ ಸೂಸುವ ಯಾವುದೋ ಗಭೀರ ವೇದನೆಯಿಂದೊಡಗೂಡಿದ ಪ್ರೀತಿ, ಕವಿಪ್ರಿಯೆಯ ಪ್ರತಿಯೊಂದು ಅಂಗವನ್ನೂ ಅಭಿನಂದಿಸುತ್ತಿತ್ತು.

ಕಣ್ತುಂಬ ನೋಡಿ ನೋಡಿ ಜೇಬುನ್ನೀಸಾ ಒಮ್ಮೊಮ್ಮೆ ನಗುನಗುತ್ತ ಎನ್ನುತ್ತಿದ್ದಳು: “ ತಂಗೀ, ರಾಶಿ ರಾಶಿ ಅಡಿಗೆಯಾಯಿತು- ಒಂದೇ ಊಟದಲ್ಲಿ ನಾನೆಷ್ಟು ಉಂಡೇನು ? ನಡೆ, ಮೈತೊಳೆದುಕೊಂಡು ಬರುವಾ. ”

ಇದಕ್ಕುತ್ತರವಾಗಿ ಕವಿಪ್ರಿಯೆ ಕತ್ತು ಕೊಂಕಿಸಿ, ಕಟಾಕ್ಷವನ್ನು ಬೀರಿ ನಸುನಗುವಳು ಮಾತ್ರ.

ಬಾದಶಾಜಾದಿ ಮುಗ್ಧನಯನಗಳಿಂದ ನೋಡುನೋಡುತ್ತ ನಗುತ್ತ ನುಡಿದಳು: “ ಏಳು ತಂಗೀ, ಅಡಿಗೆಯನ್ನು ಸಾಕುಮಾಡು. ಇಲ್ಲದಿದ್ದರೆ ಎಲ್ಲವನ್ನೂ ಮುಟ್ಟಿಬಿಡುತ್ತೇನೆ. ”

ಕವಿಪ್ರಿಯೆ ನಗುತ್ತ ಅಡಿಗೆಯನ್ನು ಮುಗಿಸಿದಳು—ಇಬ್ಬರೂ ಬಾವಿಗೆ

ವೈತೊಳೆಯಲು ಹೋದರು. ಮೆಟ್ಟಿಲ ಮೇಲೆ ಇಬ್ಬರೂ ತಮ್ಮ ತಮ್ಮ ವಸ್ತ್ರ ಆಭರಣಗಳನ್ನು ಬಿಚ್ಚಿಟ್ಟು ನೀರಿಗಿಳಿದರು. ಮಾತಾಡುತ್ತ, ನಗೆಯಾಡುತ್ತ, ಚೆಲ್ಲಾಟವಾಡುತ್ತ, ಇಬ್ಬರೂ ನೀರಾಟವಾಡಿದರು.

ಹಠಾತ್ ಬಾದಶಾಜಾದಿ ನೀರು ಬಿಟ್ಟು ಮೇಲೆ ಬಂದಳು. ಕವಿಪ್ರಿಯೆ ಬಿಚ್ಚಿಟ್ಟಿದ್ದ ಬಟ್ಟೆಗಳನ್ನು ಉಟ್ಟುಕೊಳ್ಳತೊಡಗಿದಳು.

"ಇದೇನಕ್ಕ, ನನ್ನ ಬಟ್ಟೆಗಳನ್ನು ಉಟ್ಟುಕೊಳ್ಳುತ್ತೀಯಲ್ಲ!" ವಿಸ್ಮಿತೆಯಾಗಿ ಕವಿಪ್ರಿಯೆ ಕೇಳಿದಳು.

ಬಾದಶಾಜಾದಿ ಮಾಸಲು ನಗೆ ನಕ್ಕು ಉತ್ತರವಿತ್ತಳು: "ಹಿಂದಕ್ಕೆ ನಿಮ್ಮ ಕವಿ ನನ್ನ ರತ್ನಾಭರಣಗಳು, ಜರತಾರಿಯ ವಸ್ತ್ರಗಳನ್ನು ಬಣ್ಣಿಸಿ ಹಾಡುತ್ತಿದ್ದ; ಈಗಲೋ ನಿನ್ನ ಈ ಸಾಮಾನ್ಯ ಉಡಿಗೆಯನ್ನು ಸ್ತುತಿಸುತ್ತಿದ್ದಾನೆ. ಅದಕ್ಕೇ ತಂಗೀ, ಒಮ್ಮೆ ಉಟ್ಟುಕೊಂಡು ನೋಡಬೇಕೆಂಬಾಸೆ."

ಕವಿಪ್ರಿಯೆ ಲಜ್ಜಿತೆಯಾಗಿ, "ಅಕ್ಕಾ, ನೀನು ಬಾದಶಾಜಾದೀ. ಅದರಿಂದ ನಿನಗೇನು ದುಃಖ?" ಎಂದಳು.

ಬಾದಶಾಜಾದಿ ನಕ್ಕು ಹೇಳಿದಳು: "ದುಃಖವೇ ತಂಗೀ? ಈ ಚಿನ್ನ, ಈ ಜರ, ಈ ರೇಶಿಮೆ ಹೊರಗೆ ಬಲು ಚೆಂದವಾಗಿಯೇ ಇವೆ; ಆದರೆ ಒಳಗೆ ಎಷ್ಟು ಮುಳ್ಳು ಚುಚ್ಚುತ್ತಿವೆ ಎಂಬುದನ್ನು ಅಂತರ್ಯಾಮಿಯೆ ಬಲ್ಲ!"

—

# ಪ್ರಣಯ ಪರೀಕ್ಷೆ



ಏನಾದರೂ ಕೊಂಚ ಕಲಿತು ಬರಬೇಕೆಂಬ ಬಯಕೆಯಿಂದ ನಾನು ಜಪಾನಕ್ಕೆ ಹೊರಟಾಗ, ನನ್ನ ಹಿತೈಷಿಗಳು ಏನೇನೋ ಆಸೆಗಳನ್ನು ಕಟ್ಟಿಕೊಂಡಿದ್ದರು. ನನಗೂ ನನ್ನ ಶ್ರೇಯಸ್ಸಿನ ವಿಷಯದಲ್ಲಿ ವಿಶೇಷ ಆಸ್ಥೆ-ಆಸೆಗಳಿದ್ದವೆಂದು ಬೇರೆ ಹೇಳಬೇಕಾಗಿಲ್ಲ. ಒಂದು ನಸುಕಿನಲ್ಲಿ ಈಡನ್ ಗಾರ್ಡನ್ ಘಾಟಿನಲ್ಲಿ ಹಡಗನ್ನೇರಿದಾಗ, ಆ ಮುಂಬೆಳಗಿನ ಹೊಂಬೆಳಕಿನಂತೆಯೇ ನನ್ನ ಭವಿಷ್ಯತ್ತು ಕಲ್ಪನಾದೃಷ್ಟಿಯ ಎದುರಿನಲ್ಲಿ ಒಳ್ಳೇ ಉಜ್ವಲವಾಗಿ ಕಂಗೊಳಿಸುತ್ತಿತ್ತು. ಮೊದಲಿಂದ ಕೊನೆಯ ವರೆಗೆ ಎಲ್ಲೆಲ್ಲಿಯೂ ಗೆಲವೇ ಗೆಲವು. ಎಂತಲೇ ಆಪ್ತಜನರ ಅಗಲಿಕೆಯ ನೋವಿನ ಬುತ್ತಿಯನ್ನು ಕಟ್ಟಿಕೊಂಡು ತಾಯಿನಾಡನ್ನು ಬಿಟ್ಟು, ದೂರದ ಗುರುತು ಪರಿಚಯವಿಲ್ಲದ ಯಾವುದೋ ದೇಶದತ್ತ ಸಾಗಿದಾಗ ನನ್ನ ಮೋರೆಯ ಕಳೆ ಮಾಸಲಿಲ್ಲ.

ಎಷ್ಟೋ ಅಪೂರ್ವ ದೇಶಗಳನ್ನು, ಎಷ್ಟೋ ವಿಚಿತ್ರ ಮಾನವ ಜಾತಿಗಳನ್ನು, ಎಷ್ಟೋ ಚಮತ್ಕಾರದ ದೃಶ್ಯಗಳನ್ನು ನೋಡುತ್ತ ನೋಡುತ್ತ, ಅಥಾಂಗ ಸಾಗರದ ಹೃದಯದಲ್ಲಿ ನಲಿದಾಡುತ್ತ, ಜಪಾನದ ಕಡೆ—ನನ್ನ ಕಲ್ಪನೆಯ ನಂದನವನದ ಕಡೆ—ಮುಂದುವರಿಯತೊಡಗಿದೆ.

ಕೊನೆಗೊಂದು ದಿನ ದೂರದಲ್ಲಿ ಜಪಾನಿನ ಆಯುಶ್ಚಕ್ರ ಸದೃಶವಾದ ತಟರೇಖೆ ಗೋಚರಿಸಿತು. ಜಪಾನೀಯ ನಾವಿಕರು, ಪ್ರವಾಸಿಗಳು ಅದನ್ನು ಕಂಡು ಒಕ್ಕೊರಲಿನಿಂದ ಹರ್ಷಧ್ವನಿಗೈದರು—"ಬಾನ್‌ಜಾಯಿ!" ಆಗ ನನ್ನ ಚಿತ್ತವು ಪ್ರಥಮ-ಪ್ರಣಯದ ಸಂಭಾಷಣೆಯ ಸಮಯದಲ್ಲಿ ಭಯಚಕಿತಳಾದ ನವವಧುವಿನ ಚಿತ್ತದಂತೆ ಚಂಚಲವಾಯಿತು.

ಹಡಗು ಯಾಕೋಹಾಮಾ ರೇವಿನಲ್ಲಿ ನಿಂತಿತು. ನಾನು ಇಳಿದೆ. ಆ ನಗರದಲ್ಲಿ ಎರಡು ದಿನ ವಿರಮಿಸಿ, ರಾಜಧಾನಿ ಟೋಕಿಯೊಕ್ಕೆ ಹೋಗ ವುದೆಂದು ಇಟ್ಟುಕೊಂಡಿದ್ದೆ. ಬಂದರದಿಂದ ಮೊದಲೊಂದು ಹೋಟೆಲಿಗೆ ಹೋಗಿ, ಅಲ್ಲಿ ತಂಗುವುದಕ್ಕಾಗಿ ಅಡಳಿತಗಾರರೊಡನೆ ಒಪ್ಪಂದಮಾಡಿಕೊಂಡು, ಸಾಮಾನುಗಳನ್ನು ಇರಿಸಿ ಊರನ್ನು ನೋಡಲು ಹೊರಗೆ ಹೊರಟೆ

ಇಡೀ ದೇಶವೇ ಒಂದು ಕನಸಿನಂತೆ, ಮಾಯೆಯಂತೆ, ಕಲ್ಪನೆಯಂತೆ ಅನುಭವವಾಯಿತು. ಮನೆಗಳು ನೆಳಲೆಂಬಂತೆ, ಮನುಷ್ಯರು ಗೊಂಬೆಗಳೆಂಬತೆ, ವ್ಯವಹಾರ ಯಂತ್ರವೆಂಬಂತೆ. ಬೀದಿಗಳಲ್ಲಿ ದಟ್ಟಣೆಯಿಲ್ಲ, ಸದ್ದುಗೊಂದಲ ವಿಲ್ಲ, ಬಂಡಿ-ಗಿಂಡಿಗಳ ಗಡಗಡಾಟವಿಲ್ಲ ಶಾಂತರಾದ ಬೀದಿಗರೂ ಮನುಷ್ಯ ರೆಳೆಯುವ ರಿಕ್ಷಾಬಂಡಿಗಳೂ ನಿಃಶಬ್ದ. ನಗರಕ್ಕೆ ನಗರವೇ ತಂದ್ರಾಮಗ್ನ ವಾಗಿರುವಂತೆ, ಎಲ್ಲೆಲ್ಲಿಯೂ ಒಂದು ಬಗೆಯ ಮೋಹಕವಾಯವಾದ ಸ್ತಬ್ಧತೆ ನೆಲಸಿತ್ತು. ನನ್ನ ಕಣ್ಣು ಕಂಡುದೆಲ್ಲವೂ ಹೊಸದಾಗಿತ್ತು. ನನಗೆ ಬೇರೆ ಕೆಲಸವೂ ಇರಲಿಲ್ಲ; ಎಲ್ಲವನ್ನೂ ಸೂಕ್ಷ್ಮವಾಗಿ ನಿರೀಕ್ಷಿಸುತ್ತ ನಡೆದೆ.

ಅಂಗಡಿಗಳು ಅಂದವಾಗಿದ್ದವು; ಶಿಲ್ಪಕಲೆಯ ಲೀಲಾನಿಕೇತನಗಳೇ ಎಂದರೆ ತಪ್ಪಲ್ಲ. ಒಂದೊಂದು ಅಂಗಡಿಯೂ ಇದಿರು ಹಾಯುವವರನ್ನು ಹಿಡಿದು ನಿಲ್ಲಿಸಿ ವ್ಯಾಮರೆಸುತ್ತಿತ್ತು. ವಸ್ತು ಒಡವೆಗಳಿಂದ ತುಂಬಿದ ಅಂಗಡಿ ಗಳ ಚೆಂದವೊಂದಾದರೆ, ಶೂನ್ಯವಾದ ಅಂಗಡಿಗಳ ಸೊಬಗೂ ಒಂದು ತೆರ. ಅವುಗಳ ಶೂನ್ಯತೆ ಮನಸಿಗೆ ಶಾಂತಿಯನ್ನೀಯುವುದು; ಕಣ್ಣುಗಳನ್ನು ಚುಚ್ಚಿ ನೋಯಿಸುವುದಲ್ಲ.

ಒಂದು ಬರಿದಾದ ಅಂಗಡಿಯ ಮುಂದೆ ನಿಂತು, ಅದರ ರಿಕ್ತಸೌಂದರ್ಯ ವನ್ನು ಆಶಾಕ್ಕಾಗಿ ನೋಡುತ್ತಿದ್ದೆ. ಆಗ ಯಾರದೋ ಜೇನ್ದನಿಯೊಂದು ನನ್ನನ್ನು ಸ್ವಾಗತಿಸಿ ಚಕಿತಗೊಳಿಸಿತು:

"ದಾನ್ನಾ ಮುಕಾಯ್ರು!"

(ಚಿತ್ತಯಿಸಬೇಕು ಮಹಾಶಯ.)

ನಾನು ಎಚ್ಚತ್ತು ನೋಡಿದೆ ನಾನೊಂದು ಚಾ ಅಂಗಡಿಯೆದುರು ನಿಂತಿದ್ದೇನೆ. ತರುಣಿಯೊಬ್ಬಾಕೆ ಕೈಗಳೆರಡನ್ನೂ ತೊಡೆಗಳ ಮೇಲಿಟ್ಟು

ಕೊಂಡು, ನಸುಬಾಗಿ ನನ್ನನ್ನು ತನ್ನ ಅಂಗಡಿಗೆ ಆಮಂತ್ರಿಸುತ್ತಿದ್ದಾಳೆ—ದಾನ್ನಾ ಮುಕಾಯ್ರು! ಆ ಸ್ವರದಲ್ಲದೇನು ಭವ್ಯತೆ, ಏನು ವಿನಯ! ಅಭ್ಯರ್ಥನೆಯ ಆ ಭಂಗಿ ಎಂತಹ ಸರಲ! ನಮ್ಮ ಮನೆಯಲ್ಲಿ ಚಾ ಕುಡಿಯುವ ಪರಿಪಾಠವಿರಲಿಲ್ಲ. ಆದರೂ ಇಂತಹ ತರುಣಿಯ ಈ ಬಗೆಯ ಕರೆಯನ್ನು ಅಸಡ್ಡೆ ಮಾಡಲಾಗಲಿಲ್ಲ. ಚಾಯಾ—ಚಹಾಭವನ—ದಲ್ಲಿ ಪ್ರವೇಶಿಸಿದೆ.

ತರುಣಿ—ಚಾಯಾ ಓನ್ನಾ (ಚಾ ಅಂಗಡಿಕಾರ್ತಿ)—ಅದೇ ಭಂಗಿಯಲ್ಲಿ, ಎರಡೂ ತೊಡೆಗಳ ಮೇಲೆ ಕೈಯಿರಿಸಿ, ಕೊಂಚ ಆನತವದನಳಾಗಿ ನನ್ನೆದುರು ಬಂದು ನಿಂತಳು. ಆಮೇಲೆ ಸರಳವಾಗಿ ನಿಂತು ಒಂದು ಕುರ್ಚಿಯನ್ನೆಳೆದು, "ಓ ಕಾಕೇ ನಾಸಾಯಿ! (ಕುಳಿತುಕೊಳ್ಳೋಣವಾಗಲಿ)" ಎಂದಳು.

ನಾನು ಕುರ್ಚಿಯಲ್ಲಿ ಕುಳಿತುಕೊಂಡೆ. ಚಾಯಾ ಓನ್ನಾ ಗೊಂಬೆಯಾಟದ ಗೊಂಬೆಯಂತೆ ನಿಶ್ಶಬ್ದವಾಗಿ ಒಳಗೆ ಹೊರಟುಹೋದಳು. ಕೆಲ ನಿಮಿಷಗಳಲ್ಲಿ ಒಂದು ಬಟ್ಟಲು ಚಾ ತಂದು ನನ್ನೆದುರಿನಲ್ಲಿರಿಸಿ, ಮತ್ತೆ ಹೋಗಿ ಒಂದು ತಟ್ಟೆಯಲ್ಲಿ ಕೆಲವು 'ಸಾಕುರಾಮೋಚಿ' (ಒಂದು ತಿಂಡಿ) ತಂದಳು

ಚೀನಿಮಣ್ಣಿನ ಶುಭ್ರ ಸ್ವಚ್ಛ ಬಟ್ಟಲಿನಲ್ಲಿ ಈಷತ್ ಹರಿದ್ವರ್ಣದ ಚಾದ ಕ್ಷೀಣ ಆಭಾಸವು, ಆ ತರುಣಿಯ ಕೆನ್ನೆಗಳ ಅನುಕರಣವಾಗಿದ್ದಿತು; ಸಾಕುರಾಮೋಚಿಯ ಒಡಲ ತನಿಗಂಪು ಆಕೆಯ ಒಳಗನ್ನೇ ಬೀರುವಂತಿತ್ತು. ನಾನು ಬಟ್ಟಲನ್ನು ತುಟಿಗೆ ಸೋಂಕಿಸಿ ಗುಟುಕು ಗುಟುಕು ಸುವಾಸನೆಯ ಚಾವನ್ನೂ ನಡುನಡುವೆ ಸಾಕುರಾಮೋಚಿಯನ್ನೂ ಸವಿಯಲಾರಂಭಿಸಿದೆ. ನನ್ನ ಕಣ್ಣುಗಳೆರಡೂ ಆ ತರುಣಿಯ ಮೈಬಳ್ಳಿಯಲ್ಲಿಯೇ ಆಡಿಕೊಂಡಿದ್ದವು.

ಆಕೆ ತದ್ರೂಪ ರಾತ್ರಿರಾಣಿ ಹೂವೇ-ಹಾಗೆ ಶುಭ್ರ, ಹಾಗೆ ತನ್ವಿ, ಹಾಗೆ ಕೋಮಲ, ಹಾಗೆ ಮಧುರ. ಅವಳು ಧರಿಸಿದ ಚಿತ್ರವಿಚಿತ್ರ ಕಿಮಾನೋ—ಸೃಷ್ಟಿಕರ್ತನು ಬಹು ವರ್ಣಗಳ ಕುಂಚಗಳಿಂದ ರಾತ್ರಿರಾಣಿಯ ಮೈಯನ್ನು ಬಣ್ಣಿಸಿದಂತೆ—ಅವಳ ಚೆಲುವಿಗೆ ಕಳೆ ತಂದಿತ್ತು. ನೋಡಿ ನೋಡಿ ನಾನು ಮುಗ್ಧನಾದೆ.

ನನ್ನ ಬಟ್ಟಲು ಬರಿದಾಗಲು ಎಷ್ಟೋ ಹೊತ್ತು ಹಿಡಿಯಿತು. ಆಮೇಲೂ ಕೆಲಹೊತ್ತು ಅಲ್ಲಿರಬೇಕೆಂಬ ಆಸೆ ನನಗೆ. ನೆಪವನ್ನು ಹುಡುಕಿದೆ. ಏನಿರ

ಬೇಕು ನೆಪ ? ಉಪಾಯವಿಲ್ಲದೆ ಏಳಬೇಕಾಯಿತು. ಚಾದ ಬೆಲೆಯನ್ನೀಯು ತ್ತಲೂ ತರುಣಿ ಅತಿ ನುಣ್ಣನೆಯ ದನಿಯಲ್ಲಿ " ಆರಿಗಾತೋ ! (ಧನ್ಯವಾದ) " ಎಂದಳು.

ಇದಕ್ಕೆ ಏನೆಂದು ಉತ್ತರವೀಯಬೇಕೆಂಬುದು ನನಗೆ ತಿಳಿಯದು. ಮುಗುಳುನಗೆಯನ್ನು ನಕ್ಕು ತಲೆ ಬಾಗಿಸಿದೆ. ಆ ನಗೆಯಲ್ಲಿ ನನ್ನ ಅಂತ ರಂಗದ ತರಲತೆಯನ್ನೆಲ್ಲ ಹೊರಸೂಸಿ ತರುಣಿಗೆ ತಿಳಿಸಿದೆ—' ನಾನು ವಿದೇಶಿ, ನಾನಿಲ್ಲಿ ಬಾಯಿದ್ದೂ ಮೂಕ; ಆದರೆ ಸೌಂದರ್ಯವನ್ನು ಆದರಿಸಬಲ್ಲ ಸರಸ ಹೃದಯವೊಂದು ಈ ಕವಿಯ ತೊರಲಿನ ಒಳಗಡೆಯಿದೆ.'

ನಾನು ಹೊರಟೆ. ತರುಣಿಯೂ ' ಚಾಯಾ ' ದ ಬಾಗಿಲ ವರೆಗೆ ನನ್ನೊಂದಿಗೆ ಬಂದಳು. ಮತ್ತೆ ಪೃಥ್ವಿಯಲ್ಲಿಯ ಎಲ್ಲ ಮಾಧುರ್ಯವನ್ನೂ ತನ್ನ ಕಂಠಸ್ವರದಲ್ಲಿ ಬೆರಸಿ ನನಗೆಂದಳು: " ಸಾಯೋ ನಾರಾ ! ಆರಿಗಾತೋ ಗೋಜಾಯಿಮಾಶ್, ಮಾತಾ ನೇಗಾಯಿಮಾಸ. (ಹೋಗಿ ಬನ್ನಿ, ಧನ್ಯ ವಾದ ಮಹಾಶಯರೆ, ಮತ್ತೆ ದಯಮಾಡಿ ಅನುಗ್ರಹಿಸಿ) "

ಅವಳು ಏನೆಂದಳೆಂಬುದು ನನಗೇನೂ ಅರ್ಥವಾಗಲಿಲ್ಲ ಹಾವಭಾವ ದಿಂದ ನನಗೆ ತಿಳಿದುದೆಂದರೆ—ಮಿತ್ರರೆ, ಈಗಿನ ಮಟ್ಟಿಗೆ ನಮಸ್ಕಾರ. ಆದರೆ ಇದೇ ಕೊನೆಯ ನಮಸ್ಕಾರವಾಗದಿರಲಿ. ಮತ್ತೆ ಬನ್ನಿ ಮಿತ್ರರೆ, ಮತ್ತೆ ಬನ್ನಿ· ನಾನು ಗೋಣಿನಿಂದ ಸಮ್ಮತಿಯನ್ನು ಸೂಚಿಸಿ ಹೊರಟು ಬಂದೆ.

ಪ್ರಪಂಚ ಎಷ್ಟೋ ಜನರಿಂದ ತುಂಬಿದೆ. ಆದರಲ್ಲಿ ಒಬ್ಬೊಬ್ಬರೊಡನೆ ಹೇಗೋ ಒಂದು ಕ್ಷಣ ಮಿಲನವಾಗುತ್ತದೆ, ಅವರ ಮರೆವು ಎಂದೆಂದಿಗೂ ಆಗುವುದಿಲ್ಲ. ಅದೇನು ಚೆಲುವಿನ ಮೋಹವೋ ಹೊಸತನದ ಮಾದಕತೆಯೋ ಸರಿಯಾಗಿ ಹೇಳಲು ಬಾರದು. ತನ್ನ ಜೀವ ಇಷ್ಟು ದಿನ ಅವರ ಪ್ರತೀಕ್ಷೆ ಯಲ್ಲಿಯೇ ವಿರಹವೇದನೆಯನ್ನು ಅನುಭವಿಸುತ್ತಿತ್ತೋ ಏನೋ ಎಂಬಂತೆ ಅವರ ಮಿಲನದಿಂದ ಎದೆ ತುಂಬಿ ಬರುವುದು, ಜೀವನ ಧನ್ಯವೆನಿಸುವುದು·

ಒಬ್ಬ ಸಾಮಾನ್ಯ ಚಾಯಾ-ಓನ್ನಾಳನ್ನು ಕಂಡು ನನ್ನ ಒಲವಿನ ಕಡಲು ಉಕ್ಕೇರಿತು. ಅವಳ ಕೋಮಲ ರೂಪ, ಮಧುರ ವಾಣಿ, ಲಲಿತ ಭಂಗಿ, ಸರಸ ಸಂಗ ನನ್ನ ಅಂತರ್ಯವನ್ನು ಭಾವಾನಂದಗಳಿಂದ ತುಂಬಿ ಬಿಟ್ಟವು.

ಎರಡು ದಿನವಷ್ಟೇ ಯಾಕೋಹಾಮಾದಲ್ಲಿ ಇರುವುದೆಂದು ಗೊತ್ತು ಮಾಡಿದ್ದೆ. ಈ ಎರಡು ದಿನಗಳಲ್ಲಿ ಎಷ್ಟು ಸಲ ಸಾಧ್ಯವೋ ಅಷ್ಟು ಸಲ ಅವಳನ್ನು ನೋಡಿ ನನ್ನ ತಳಮಳಿಸುವ ಹೃದಯವನ್ನು ತಣಿಸಬೇಕೆಂದು ನಿಶ್ಚಯಿಸಿದೆ. ಅಂದು ಸಂಜೆಗೂ ಮತ್ತೆ ಚಾಯಾಕ್ಕೆ ಹೋದೆ. ನನ್ನನ್ನು ಕಂಡು ಆ ತರುಣಿ, ಅಲ್ಲಿನ ದೇಶಾಚಾರದಂತೆ ತೊಡೆಗಳ ಮೇಲೆ ಕೈಯಿರಿಸಿ ಕೊಂಡು ಈಷತ್ ಆನತಳಾಗಿ ಸ್ವಾಗತವಿತ್ತಳು.

“ ಕೋಸ್ಸ್ಯಾನ್ ಓಷಾ (ಶುಭ ಸಂಜೆ) ” ಎಂದಳು ಚಾಯಾ-ಓನ್ನಾ ಮಧುರ ಸ್ವರದಲ್ಲಿ.

ಅವಳ ಮೊಗದಲ್ಲಿ ನಗೆಯ ಗೆರೆ ಇರಲಿಲ್ಲ; ದನಿಯಲ್ಲಿ ಪ್ರಕಂಪವಿರಲಿಲ್ಲ. ಆದರೆ ಅವಳ ಪುಟ್ಟ ನೀಳ್ಗಣ್ಣುಗಳು ನನ್ನ ದರ್ಶನದಿಂದ ಹೊಳಪುಗೂಡಿದ್ದವು. ನಾನೂ ಅವಳಿಗೆ ಶುಭಸಂಧ್ಯೆಯನ್ನು ಕೋರಿದೆ.

ರಾತ್ರಿ ನಾನಿಳಿದಿದ್ದ ಹೋಟೆಲಿಗೆ ಮರಳಿದೆ. ನನ್ನ ಮನಸು ಮಾತ್ರ ಚಾ ಅಂಗಡಿಯಲ್ಲಿಯೆ ಉಳಿಯಿತು. ಆ ಸ್ಮೃತಿಕುಸುಮದ ಸುತ್ತಲೂ ನನ್ನ ಚಿತ್ತಭ್ರಮರ ಭ್ರಮಿಸುತ್ತಲಿತ್ತು. ಆ ವಿದೇಶಿನಿಯ ವಿಷಯ ನನಗೆ ಸರಿಯಾಗಿ ತಿಳಿಯದು, ನನ್ನ ವಿಷಯವನ್ನೂ ಅವಳಿಗೆ ತಿಳಿಸುವುದಾಗಲಿಲ್ಲ. ಆದರೆ ಆ ನನ್ನ ನೀರವ ಭಾಷೆಯ ಅಂತರಾಳದಲ್ಲಿ ಹುದುಗಿದ್ದ ಕಲ್ಪನೆ, ಭಾವಪುಂಜ ವಿಚಿತ್ರವಾದುದು. ಅದೇ ನನ್ನ ಒಳಹೊರಗುಗಳನ್ನು ಪುಲಕಿತಗೊಳಿಸುತ್ತಿತ್ತು. ರಾತ್ರಿಯೆಲ್ಲೆಲ್ಲ ಚಾಯಾ-ಓನ್ನಾಳ ಕನಸೇ ಕನಸು, ಹಳವಂಡವೇ ಹಳವಂಡ ಬೆಳಗಿನಲ್ಲಿ ಎಚ್ಚತ್ತಾಗ ಕಣ್ಣು ತೆರೆದುದೂ ಅವಳನ್ನು ನೆನೆಯುತ್ತಲೆ.

ಅವಸರದಿಂದೆದ್ದು ಚಾಯಾದ ಕಡೆ ಹೊರಟೆ. ಆಗಿನ್ನೂ ಪೂರಾ ಬೆಳಕು ಹರಿದಿರಲಿಲ್ಲ; ಚಾಯಾದ ಬಾಗಿಲು ತೆರೆದಿರಲಿಲ್ಲ. ಮುಚ್ಚಿದ ತಾವರೆಯ ಸುತ್ತ ತಿರುಗುವ ವ್ಯಾಕುಲವಾದ ತುಂಬಿಯಂತೆ ಬಾಗಿಲು ಯಾವಾಗ ತೆರೆಯುವುದೆಂದು ಕಾತರಗೊಂಡ ಚಿತ್ತದಿಂದ ನಾನು ಅಂಗಡಿಯ ಮುಂದೆ ಎಡೆಯಾಡತೊಡಗಿದೆ. ಚೆನ್ನಾಗಿ ಬೆಳಕಾದ ಮೇಲೆ ಚಾಯಾದ ಬಾಗಿಲು ತೆರೆಯಿತು. ಅಂಗಡಿಕಾರ್ತಿ ನನ್ನನ್ನು ಕಂಡವಳೆ ನಸುನಗೆಯೊಡನೆ, “ ಓಹಾಯೊ! (ಸುಪ್ರಭಾತಂ) ” ಎಂದಳು,

ನಾನೂ ಅವಳಿಗೆ ಸುಪ್ರಭಾತವನ್ನು ಹಾರಯಿಸಿದೆ. 'ಬೆಳಗಾಗೆದ್ದು ಶ್ರೀಮುಖವನ್ನು ಕಂಡೆ, ನನ್ನೀ ಸುದಿನವು ಸುಖಕರವಾಗಿ ಕಳೆಯುವುದು' ಎಂದು ನನ್ನೊಳಗೆ ನಾನು ಎಂದುಕೊಂಡೆ.

ಎರಡೇ ದಿನಗಳಲ್ಲಿ ನಾವಿಬ್ಬರೂ ಪರಸ್ಪರ ಆತ್ಮೀಯರಾದೆವು. ಈ ಲೋಕಕ್ಕೆ ಈ ತರುಣಿ ಬಂದುದು ನನಗಾಗಿಯೇ, ಏಳು ಕಡಲುಗಳ ಹದಿ-ಮೂರು ಹೊಳೆಗಳ ಆಚೆಯ ದೂರದ ಜಪಾನದಲ್ಲಿ ಇವಳ ಮಿಲನಕ್ಕಾಗಿಯೇ ಈ ನನ್ನ ಅಭಿಸಾರ—ವಿದ್ಯೆಗಾಗಿ ಅಲ್ಲ, ಅರ್ಥಕ್ಕಾಗಿ ಅಲ್ಲ ನಾನು ಬಂದುದು—ಇದು ನನ್ನ ಪ್ರೇಮಯಾತ್ರೆ ಎಂದು ನನಗೆನಿಸಿತು.

ಮೊಸಲಾಗಿರಿಸಿದ್ದ ದಿನಗಳೆರಡೂ ಕಳೆದವು. ನನ್ನ ಗಮನದ ಗುರಿಯಾಗಿದ್ದ ಟೋಕಿಯೋದ ಆಕರ್ಷಣೆ ಲೋಪವಾಗಿತ್ತು. ಯಾಕೋಹಾಮಾದಲ್ಲಿಯೇ ಯಾವುದೊಂದು ವಿದ್ಯಾಲಯವನ್ನು ಸೇರಬೇಕು, ಅಥವಾ ಯಾವುದೊಂದು ಉದ್ಯಮ ಕೇಂದ್ರದಲ್ಲಿ ಹೊಂದಿಕೊಳ್ಳಬೇಕು ಎಂದೆಣಿಸಿದೆ. ಯಾವುದಕ್ಕೂ ಮೊದಲು ಈ ನಾಡಿನ ನುಡಿಯನ್ನು ಕಲಿಯುವುದು ಅವಶ್ಯವೆಂಬ ತಿಳಿವಳಿಕೆ ಚಾಯಾ ಓನ್ನಾಳ ಸಂಪರ್ಕದಿಂದ ನನಗುಂಟಾಗಿತ್ತು.

"ಇಂಗ್ಲಿಷನ್ನು ಬಲ್ಲ, ನನಗೆ ಜಪಾನಿಯನ್ನು ಕಲಿಸಬಲ್ಲ ಒಬ್ಬ ಶಿಕ್ಷಕನನ್ನು ಗೊತ್ತುಮಾಡಿ ಕೊಡಿರಿ." ಎಂದು ನಾನು ಹೋಟೆಲಿನ ಆಡಳಿತಗಾರನನ್ನು ಕೇಳಿದೆ. ಅವನು ಒಬ್ಬ ಗಾಕ್ಶಾ (ಪಂಡಿತ) ನನ್ನು ಯೋಜಿಸಿಕೊಟ್ಟ.

ನಾನು ಮೊದಲು ಗಾಕ್ಶಾನಿಂದ ಪ್ರೇಮಪಾಠವನ್ನೇ ಕಲಿಯಲಾರಂಭಿಸಿದೆ. ಪ್ರಣಯದ ಅಭಿಧಾನದಿಂದ ಬಹು ಪ್ರಚುರವಾದ ಕಥೆಗಳನ್ನೇ ಆತನಿಂದ ಅನುವಾದ ಮಾಡಿಸಿ ಕಲಿಯತೊಡಗಿದೆ. ಆ ಮನುಷ್ಯನೂ ಒಳ್ಳೇ ರಸಿಕ, ಪ್ರಣಯ ವ್ಯಾಪಾರದಲ್ಲಿ ಅಭಿಜ್ಞ. ನನಗೆ ಹೇಗೆ ಬೇಕೋ ಹಾಗೆಯೆ ಅವರು ನನ್ನನ್ನು ತರಬೇತುಗೊಳಿಸತೊಡಗಿದರು.

"ಏನಪ್ಪಾ ವಿದೇಶೀಯ ವಿದ್ಯಾರ್ಥಿ, ಈ ದೇಶದ ದಂಡೆಯಲ್ಲಿ ಅಡಿಯಿಡುತ್ತಿಡುತ್ತಲೇ ಪ್ರೇಮದಲ್ಲಿ ಬಿದ್ದೆಯೋ ?" ನಗುನಗುತ್ತ ಗಾಕ್ಶಾ ಒಂದು ದಿನ ನನ್ನನ್ನು ಕೇಳಿದರು.

"ಹಾಂ, ಸೇನ್‌ಸೇಯಿ (ಗುರುಗಳೇ)."

" ಆ ತರುಣಿ ಹೇಗಿದ್ದಾಳೆ ? "

" ಸಾಕುರಾ ಹಾನಾದಂತೆಯೆ ಗಾಕ್ಯಾ ! "

" ಎಲ್ಲಿ, ಎಲ್ಲಿ ಸಿಕ್ಕಿತು ಅಂತಹ ನಿಧಿ ? "

" ಅದನ್ನು ಮಾತ್ರ ಹೇಳಲಾರೆ ಗುರುವೆ. " ಎಂದೆ ನಾನು.

ಗಾಕ್ಯಾ ನಸುನಕ್ಕರು. " ಒಳ್ಳೇದು, ಹೇಳದಿದ್ದರೆ ಬಿಡು. ನಾನು ನಿನಗೆ ಪ್ರಣಯದ ಭಾಷೆಯನ್ನು ಕಲಿಸುವೆ—ಶೀಘ್ರವೇ ನಿನ್ನ ಬಯಕೆ ಈಡೇರುವ ಹಾಗೆ. ಮದುವೆಗೆ ನನ್ನನ್ನು ಕರೆಯಲು ಮರೆಯಬಾರದು ಮಿತ್ರ. " ಎಂದರು.

ಹೀಗೆ ಎರಡನೆಯವರಿಂದ ನನ್ನ ಭಾವವನ್ನು ಅನುವಾದ ಮಾಡಿಸಿಕೊಂಡು, ಬಾಯಿಪಾಠಮಾಡಿ, ನನ್ನ ಪ್ರಣಯ ಚೆನ್ನಾಗಿ ಮುಂದುವರಿಯುತ್ತಲಿತ್ತು. ಗುರುವಿನೊಡನೆ ಗೆಳೆತನವೂ ಚೆನ್ನಾಗಿ ಕೂಡಿತು. ದಿನಕ್ರಮದಲ್ಲಿ ಅವರೂ ಒಬ್ಬ ನೂತನ ಪ್ರಣಯಿ, ಅವರಿಗೂ ಒಬ್ಬ ಚಿಕ್ಕ ಪ್ರಣಯಿನಿಯಿದ್ದಾಳೆ, ಹಾಸು-ನೋ-ಹಾನಾದಂತೆ ಸ್ನಿಗ್ಧಳಾಕೆ, ಎಂದು ನನಗೆ ಗೊತ್ತಾಯಿತು. ಎಂತಲೇ ನನಗೆ ಸರಿಯಾದ ಶಿಕ್ಷಣವನ್ನೀಯಲು ಅವರು ತಕ್ಕ ಗುರುವಾಗಿದ್ದರು.

ಇಂತು ಹಲವು ದಿನಗಳು ಸಾಗಿದವು. ಒಂದು ದಿನ ಗಾಕ್ಯಾ ನನಗೆ ಕಲಿಸಲು ಬಂದಾಗ ಗಟ್ಟಿಯಾಗಿ ನಗುತ್ತ ನುಡಿದರು: " ಮಿತ್ರ, ನೀನು ಸಿಕ್ಕು ಬಿಟ್ಟೆ ! "

ಅದೇನೆಂಬುದನ್ನು ಕೆಲಮಟ್ಟಿಗೆ ಅನುಮಾನಿಸಿಕೊಂಡು ನಗುನಗುತ್ತ ನಾನೆಂದೆ: " ಏನು ಗಾಕ್ಯಾ, ಅದೇನು ? "

ಗಾಕ್ಯಾ ನನ್ನ ಬೆನ್ನನ್ನು ತಟ್ಟಿ ಹೇಳಿದರು: " ಚಾಯಾ-ಓನ್ನಾ ನಿನ್ನ ಪ್ರಣಯಿನಿ, ಈಗ ನನಗೆ ಗೊತ್ತಾಯಿತು. ಆಕಸ್ಮಾತ್ತಾಗಿ ಇಂದು ಆ ದಾರಿಯಿಂದ ಬರುತ್ತಿದ್ದಾಗ, ನಿಮ್ಮ ಮಿಲನ ಸಂಭ್ರಮದ ಭಾವವನ್ನು ಕಂಡು ತರ್ಕಿಸಿದೆ. ಇದನ್ನು ನನಗೆ ಮೊದಲೇ ಹೇಳಿದ್ದರೆ, ನೀನು ಇಷ್ಟೆಲ್ಲಾ ರೂ ಹಾಕಿ ಕಷ್ಟಪಡಬೇಕಾಗುತ್ತಿರಲಿಲ್ಲ, ನನಗೂ ಇಷ್ಟು ತೊಂದರೆ ತಪ್ಪುತ್ತಿತ್ತು. ಒಂದು ಮಂತ್ರದಿಂದ ಎಲ್ಲವನ್ನೂ ಸರಿಯಾಗಿ ಸಾಧಿಸಬಹುದಿತ್ತು. "

" ಏನು ಗಾಕ್ಯಾ, ಯಾವುದು ಆ ಮಂತ್ರ ? " ನಾನು ಉತ್ಸಾಹಿತನಾಗಿ ಕೇಳಿದೆ.

" ಬಾ, ನಿನಗೆ ಹೇಳಿಕೊಡುತ್ತೇನೆ " ಎಂದು ಗಾಕ್ಯಾ ಅಂದು ಹೊಸ ಬಗೆಯ ಎಷ್ಟೋ ಮಾತುಗಳನ್ನು ಒಳ್ಳೇ ಆಸ್ಥೆಯಿಂದ ತಿಳಿಸಿದರು. ಬಳಿಕ, " ಈ ಮಾತುಗಳನ್ನು ಕೇಳಿದರೆ ಚಾಯಾ ಓನ್ನಾ ಅತ್ಯಂತ ಮುಗ್ಧಳಾಗಿ ಪೂರ ನಿನ್ನವಳಾಗಿ ಬಿಡುವಳು " ಎಂದು ಹೇಳಿ ಗಾಕ್ಯಾ ತುಂಬಾ ನಕ್ಕರು.

ತುಂಬಿ ತುಳುಕುವ ಔತ್ಸುಕ್ಯದಿಂದ, ಆನಂದದಿಂದ ಪರವಶನಾಗಿ, ನಾನು ಅಂದು ಸಾಯಂಕಾಲ ಕತ್ತಲೆ ದಟ್ಟವಾಗುವುದರೊಳಗೇ ಚಾಯಾಕ್ಕೆ ಹೋದೆ. ನಿಯಮದಂತೆ ಅಭಿವಾದನ-ಪ್ರತ್ಯಭಿವಾದನಗಳಾಗಿ, ಚಾಪಾನ ಪೂರಯಿಸಿದ ಮೇಲೆ ನಾನು ಚಾಯಾ-ಓನ್ನಾಳನ್ನು ನನ್ನ ತೀರ ಹತ್ತಿರಕ್ಕೆ ಎಳೆದು ಕುಳ್ಳಿರಿಸಿಕೊಂಡೆ.—ಆ ಚಿಕ್ಕ ಮೂರ್ತಿಯನ್ನು ದೂರದಲ್ಲಿರಿಸಿದರೆ ಹುಡುಕಿದರೂ ಸಿಕ್ಕುವುದು ಕಠಿನ. ದೂರದರ್ಶಕ ಕನ್ನಡಿಯನ್ನು ಹಿಡಿದು ನೋಡಿದರೆ ಕಾಣುವಂತಹ ಚಿಕ್ಕೆಯವಳು; ಮೇಜಿನ ಮೇಲೆ ಅಲಂಕಾರಕ್ಕಾಗಿ ಇರಿಸುವ ಗೊಂಬೆಯವಳು; ಎದೆಯ ಮೇಲೆ ಅಂದವಾಗಿ ಸಿಕ್ಕಿಸಿಕೊಳ್ಳು ವಂತಹ ಹೂವವಳು !

ಅವಳ ಪುಟ್ಟ ಕೈಯನ್ನು ನನ್ನ ಕೈಯಲ್ಲಿ ಹಿಡಿದಾಗ ಗಂಗಾ-ಯಮುನೆ ಗಳ ಸಂಗಮದ ಚಿತ್ರ ನನ್ನ ಮನವಲ್ಲಿ ಮೂಡಿತು. ನಸುನಗೆಯೊಡನೆ ಗಾಕ್ಯಾ ಕಲಿಸಿದ ಮಾತುಗಳನ್ನು ಅವಳ ಕಿವಿಯಲ್ಲಿ ಒಡನುಡಿದೆ.

ಗುರುದೇವ ಕಲಿಸಿದ ಮಂತ್ರವದು. ನಿಜವಾಗಿಯೂ ಅದು ಮಂತ್ರವೆ. ಆದರದು ಭೂತಮಂತ್ರ, ಸರ್ವನಾಶದ ಮಂತ್ರ ! ಅದನ್ನು ಕೇಳಿದೊಡನೆ ಅವಳು ನನ್ನ ಕೈಯಲ್ಲಿಯ ತನ್ನ ಕೈಯನ್ನು ಭರ್ರನೆ ಕಿತ್ತಿಕೊಂಡು, ಅತ್ಯಂತ ಬಿರುಸುನೋಟದಿಂದ ನನ್ನನ್ನು ನೋಡಿದಳು.

ಆ ನೋಟದ ಅರ್ಥವನ್ನರಿಯದೆ ನಾನು ಗಾಕ್ಯಾ ಹೇಳಿದ ಇನ್ನು ಕೆಲವು ಮಾತುಗಳನ್ನು ಉಚ್ಚರಿಸಿದೆ. ಆಗವಳು ಬಿಟ್ಟ ಬಾಣದಂತೆ ಚಟ್ಟನೆದ್ದು ದೂರ ಸಿಡಿದು ನಿಂತಳು. ಅವಳ ಸರ್ವಾಂಗದಲ್ಲಿಯೂ ತುಚ್ಛ ಭಾವ, ಅವಿ ಶ್ವಾಸ, ಅವಹೇಲನೆ ಹೊರಸೂಸುವಂತೆ ತೋರಿತು.

ನಾನು ಕಿಂಕರ್ತವ್ಯ ಮೂಢನಾಗಿ ಗುರು ಕಲಿಸಿದ ಮಂತ್ರೋಚ್ಚಾರವನ್ನು ಮುಂದುವರಿಸಿದೆ. ಆಗ ಚಾಯಾ-ಓನ್ನಾ ಓಡಿಹೋಗಿ ಅಂಗಡಿಯ ಜನಗಳಿಗೆ ಏನೋ ಹೇಳಿದಳು. ಕೂಡಲೆ ಹಲವಾರು ಜನರು ಧಾವಿಸಿ ಬಂದು ನನ್ನನ್ನು ಸುತ್ತುಗಟ್ಟಿದರು. ಎಲ್ಲರೂ ಸೇರಿ ನನ್ನನ್ನು ಬಡಿದು ಅಂಗಡಿಯಿಂದ ಹೊರದಬ್ಬುವರೆಂಬಂತೆ ತೋರಿತು. ನನಗೆ ಏನೆಂಬುದೇ ತಿಳಿಯಲಿಲ್ಲ. ಆ ಗಲಭೆಯಲ್ಲಿ ಯಾರಿಗಾದರೂ ಏನಾದರೂ ಹೇಳೇನೆಂದರೆ ಕೇಳೇನೆಂದರೆ ಅಸ್ಪದವೂ ಇರಲಿಲ್ಲ. ಜ್ಞಾನಾಜ್ಞಾನಗಳ ನಡುವೆ ಸಿಲುಕಿ ನಾನು ದಂಗುಬಡಿದ್ದು ಕುಳಿತೆ.

ಜನರ ಗುಂಪಿನ ಬದಿಯಲ್ಲಿ ನಿಂತು ಗುರುದೇವ ಮೆಲುನಗೆ ನಗುತ್ತಿದ್ದ. ಅವರನ್ನು ಕಂಡು ಅಥಾಂಗ ಸಾಗರದಲ್ಲಿ ಒಂದು ನಡುಗಡ್ಡೆ ಸಿಕ್ಕಿದಂತೆನಿಸಿತು. " ನಾನೇನು ಮಾಡಿದೆ ಸ್ವಾಮಿ, ಈ ಅಂಗಡಿಕಾರ್ತಿಗೆ ? ಒಮ್ಮೆಲೆ ಇವಳೇಕೆ ನನ್ನ ಮೇಲೆ ಸಿಟ್ಟಾದಳು ? ನಾನು ಏನೋ ಮಾತನಾಡಲು ಹೋಗಿ ಏನಾದರೂ ಎಂಪೆಸೆ? ಅಥವಾ ಈಕೆಯೋ ಏನಾದರೊಂದು ತಪ್ಪುತಿಳಿದುಕೊಂಡಳೆ? ನನ್ನ ಮಾತನ್ನು ಸ್ವಲ್ಪ ತಿಳಿಸಿ ಹೇಳಿರಿ. " ಎಂದೆ.

ಗುರು ನಕ್ಕು ನುಡಿದರು: "ನೀನೂ ತಪ್ಪು ಮಾತನಾಡಿಲ್ಲ, ಈಕೆಯೂ ತಪ್ಪು ತಿಳಿದುಕೊಂಡಿಲ್ಲ. ನೀನು ಈಕೆಗೆ ಹೇಳಿದೆ: ' ನೀನು ಹೇಸಿ; ನನ್ನ ತೊತ್ತಾಗಲೂ ತಕ್ಕವಳಲ್ಲ; ನಿನ್ನನ್ನು ನಾನು ಕೊಂಚವೂ ಪ್ರೀತಿಸುವುದಿಲ್ಲ; ಇಷ್ಟು ದಿನ ನಿನ್ನೊಡನೆ ಸುಮ್ಮನೆ ತಮಾಶೆ ಮಾಡಿದೆನಷ್ಟೆ; ' ಇತ್ಯಾದಿ. "

ನಾನು ಅಚ್ಚರಿಗೊಂಡೆ. ಮಾಸಲು ಮೊಗದಿಂದ, " ಇದೇನಯ್ಯಾ, ಹೀಗೆಲ್ಲ ಹೇಳುವುದು ನನ್ನ ಮನಸ್ಸಿನಲ್ಲಿರಲಿಲ್ಲವಲ್ಲ ? " ಎಂದೆ

" ಹಾಗೆ ಹೇಳಿಸಬೇಕೆಂದು ನನ್ನ ಮನಸಿತ್ತು." ಎಂದು ನಗುತ್ತ ನುಡಿದರು ಗುರುಮಹಾಶಯರು.

" ಅದೇನು ಮಹಾಶಯ, ಹೀಗೇಕೆ ಮಾಡಿದಿರಿ ? " ಉದ್ವಿಗ್ನತೆಯಿಂದ ನಾನು ಕೇಳಿದೆ.

" ಚಾಯಾ-ಓನ್ನಾ ನನ್ನ ಪ್ರಣಯಿನಿ ನಾನೆಂದೋ ಈಕೆಯ ಶ್ರೀಚರಣದಲ್ಲಿ ಹೃದಯುವನ್ನು ಅರ್ಪಿಸಿದ್ದೇನೆ " ಗುರು ಮೊದಲಿನ ನಿರ್ವಿಕಾರಭಾವದಿಂದಲೇ ನಗುನಗುತ್ತ ಉಸುರಿದರು

ಇದೇನು ಅದ್ಭುತ ಸಮಸ್ಯೆ ! “ ಮಹಾಶಯರೆ, ನೀವಂತೂ ಸೋತಿದ್ದೀರಿ. ಇನ್ನು ಓಕುಸಾಮಾ (ಮಹಾಶಯಳು) ನನ್ನವಳು ! ” ಎಂದೆ.

ಗುರು ಮತ್ತೂ ನಯಭಾವದಿಂದಲೆ ನಗುತ್ತ ಉತ್ತರವಿತ್ತರು: “ಎಂದಿಗೂ ಆಗದು, ನಾನು ಬದುಕಿರುವ ವರೆಗೂ ಸಾಧ್ಯವಿಲ್ಲ. ”

ಅವರು ತೋಳೇರಿಸಿ ತಮ್ಮ ಪುಷ್ಟವಾದ ಬಾಹುವನ್ನು ನಗುನಗುತ್ತ ನನ್ನ ಮುಂದೆ ಚಾಚಿದರು. ನಾನೆಂದೆ: “ ಅಂಜಿಕೆ ತೋರಿಸಬೇಡಿರಿ ಸ್ವಾಮೀ; ನೀವು ಜಪಾನೀ ಜುಜುತ್ಸುಗಾರರಾದರೆ ನಾವು ಭಾರತೀಯ ಕುಸ್ತಿಗಡಿ; ಯಾರು ಗೆಲ್ಲುವೆವೋ ಹೇಳಲು ಬಾರದು. ಒಂದು ಪಣ ನೋಡಿ ಬಿಡುವಾ. ”

“ ಹೃದಯವನ್ನು ತೆತ್ತು ಬಡಿದಾಡುವಾಗ ಬೇರೆ ಪಣ ಎಂಥದು ? ” ಈಗಲೂ ನಗುತ್ತಲೇ ಮಾತನಾಡಿದರು ಗುರು.

ನಾನು ವಿನಯದಿಂದ ನುಡಿದೆ: “ ಗುರುಗಳೇ, ನೀವೇ ನನಗೆ ಪ್ರಣಯ ಮಂತ್ರದ ದೀಕ್ಷೆ ಕೊಟ್ಟಿರಿ; ನಿಮ್ಮಿಂದಲೇ ನಾನು ಸಾಫಲ್ಯ ಪಡೆದೆ. ಈಗೇಕೆ ವಿಘ್ನ ಮಾಡುತ್ತೀರಿ ? ”

“ ನನಗೇನು ಗೊತ್ತು—ನನ್ನನ್ನೇ ಅವಲಂಬಿಸಿ ನನ್ನ ಸರ್ವನಾಶ ಮಾಡುತ್ತೀ ಎಂಬುದು ? ಇಷ್ಟು ದಿನ ನಾನು ನಿನಗೆಷ್ಟೊ ವಿಷಯ ಕಲಿಸಿದ್ದೇನೆ. ಈಗ ಕೊನೆಯ ಮತ್ತೊಂದನ್ನು ಕಲಿಸುತ್ತೇನೆ; ಎನ್ನು—‘ಜಾನ್ನೇನ ನಾಗಾರಾ ಕೋಕೊ ಕೊ ಒ ಓಯಾಕಾರೆ ಮೋಸಿಮಾಸ. ”

“ ಗುರುಗಳೇ, ಇದರ ಅರ್ಥವನ್ನೂ ಸ್ವಲ್ಪ ಹೇಳಿಬಿಡಿರಿ. ” ನಾನು ಹತಾಶಭಾವದಿಂದ, ದುಃಖಮಲಿನ ಮುಖದಿಂದ ಕೇಳಿದೆ.

“ ನನಗೆ ದುಃಖವಾಗುತ್ತಿದೆ; ಇದೇ ನಮ್ಮ ಚಿರವಾದ ಅಗಲಿಕೆ ! ”

—

# ಸುಕು

## ೧

ವೀರೇಂದ್ರನ ಅಣ್ಣನ ಮದುವೆ. ವೀರೇಂದ್ರ ಗಂಡಿನ ಕಡೆಯ ನಿಬ್ಬಣದಲ್ಲಿ ಒಬ್ಬ. ಅಣ್ಣನ ಹೊಣೆ ಹೊತ್ತು ಬ್ರಹ್ಮದೇವರು ಕಾರ್ಯವನ್ನು ನೆರವೇರಿಸುತ್ತಿರುವಾಗ, ತಮ್ಮನ ಭಾರ ಬಿದ್ದಿತ್ತು ಮನೋಭವನ ಮೇಲೆ.

ಮದುವೆ ನಡೆದಿತ್ತು. ವೀರೇಂದ್ರ ಒಂದು ಕಡೆ ನಿಂತುಕೊಂಡು ಕನ್ಯಾಸಂಪ್ರದಾನವನ್ನು ನೋಡುತ್ತಲಿದ್ದ—ತರುಣಿಯೊಬ್ಬಳು ಹೂವಿನ ಬೀಸಣಿಕೆಯನ್ನು ಹಿಡಿದು ಸಲೀಲವಾಗಿ ವಧೂ-ವರರಿಗೆ ಗಾಳಿ ಹಾಕುತ್ತಿರುವುದನ್ನು ಕೂಡ.

ನಯವಾದ ತೆಳ್ಳನೆಯ ಮೈಕಟ್ಟಿನ ತರುಣಿ. ಹೂವಿನ ಬೀಸಣಿಗೆಯ ಸುಳಿಗಾಳಿಗೆ ಅಲುಗಾಡುವ ಎಳಬಳ್ಳಿಯೋ ಏನೋ ಎಂಬ ಹಾಗೆ ಮುಖ ದುಂಡಗೆ, ಚಂಚಲ ದೃಷ್ಟಿಯ ಅಗಲವಾದ ಕಣ್ಣುಗಳು, ಬಣ್ಣ ಸ್ನಿಗ್ಧ ಸುಗೌರ, ಕಲ್ಪನೆಯಂತೆ ಅಪರೂಪ ರೂಪ. ಅವಾಕ್ಕಾಗಿ ಅವಳನ್ನೇ ನೋಡುತ್ತಿದ್ದ ವೀರೇಂದ್ರ.

ಮನೆಯ ಒಂದು ಮೂಲೆಯಿಂದ ಯಾವನೋ ಏನೋ ಒಬ್ಬ,ಆ ಎಂದು ಕಣ್ಬಿಟ್ಟುಕೊಂಡು ಅಸಭ್ಯತನದಿಂದ ತನ್ನನ್ನೇ ನೋಡುತ್ತಿದ್ದಾನೆಂಬುದು ಆ ತರುಣಿಗೂ ತಿಳಿದಿತ್ತು. ಗುರುತು ಪರಿಚಿತಿಯೇನೂ ಇಲ್ಲದ ಮನುಷ್ಯನ ನೋಟದ ಏಟಿನಿಂದ ಅವಳು ಸಂಕುಚಿತಳಾಗುತ್ತಿದ್ದಳು. ಅದರೊಂದಿಗೆಯೇ ಅವಳಿಗೆ ಕೊಂಚ ಕೌತುಕವೂ ಎನಿಸುತ್ತಿತ್ತು. ಈ ಮನುಷ್ಯ ಇಷ್ಟು ಮಂದಿ ಇರುತ್ತಿರಲಾಗಿ ತನ್ನನ್ನೇ ಹೀಗೇಕೆ ಒಂದೇ ನೋಟದಿಂದ ನುಂಗುತ್ತಿದ್ದಾನೆ?

ತರುಣಿ ಗಾಳಿ ಹಾಕುತ್ತ, ತನ್ನ ವಿಶಾಲವಾದ ಕಣ್ಣಿನ ಕೊನೆಯಿಂದ ವೀರೇಂದ್ರನ ಕಡೆಗೆ ನೋಡಿದಷ್ಟು ಸಲವೂ ದೃಷ್ಟಿಗಳೆರಡೂ ಸಮ್ಮಿಲಿತವಾಗು

ತ್ತಿದ್ದವು. ಕೂಡಲೆ ತರುಣಿಯ ಸಂಕೋಚ ಇಮ್ಮಡಿಯಾಗುವುದು; ಅವಳು ತನ್ನ ನೋಟವನ್ನು ಆಕಡೆ ತಿರುಗಿಸಿಕೊಳ್ಳುವಳು; ಲಜ್ಜೆಗೆಂಪಿನ ಸುಳಿನಗೆಯ ಗೆರೆಯೊಂದು ಅವಳ ಅಧರವನ್ನು ಬಣ್ಣವೇರಿಸುವುದು; ಅದು—ಸ್ಫಟಿಕಪಾತ್ರ ದಲ್ಲಿಯ ಮದಿರೆಯಂತೆ—ವೀರೇಂದ್ರನಿಗೆ ಉಪಹಾರ.

ಹಾಗೆ ಅವಳು ನೋಟವನ್ನು ಹೊರಳಿಸಿಕೊಂಡರೂ ಮರುಕ್ಷಣವೇ ಅವಳಿಗೆನಿಸುವುದು— ಆತ ಈಗೇನು ಮಾಡುತ್ತಿರಬಹುದು ? ಕೂಡಲೇ ಅವಳ ದೃಷ್ಟಿ ಗೊತ್ತಾಗದಂತೆ, ಕೇವಲ ತನ್ನನ್ನೇ ದಿಟ್ಟಿಸುತ್ತಲಿದ್ದ ಆ ಮನುಷ್ಯ ನಿಂತಿದ್ದ ಮೂಲೆಯ ಕಡೆಗೆ ಅಭಿಸರಿಸುವುದು.

ಮದುವೆಯಾಯಿತು. ವರ-ಕನ್ನೆಯರು ವಾಸರಗೃಹದಲ್ಲಿ. ತರುಣಿ ಎದ್ದು ಹೋಗಿ ತನ್ನ ಗೆಳತಿಯೊಬ್ಬಳಿಗೆ ದೂರದಿಂದ ವೀರೇಂದ್ರನನ್ನು ತೋರಿಸಿ ವಿಚಾರಿಸಿದಳು: “ ಏನಕ್ಕ, ಆ ಮನುಷ್ಯ ಯಾರು ಗೊತ್ತೇ ? ”

“ ಇಲ್ಲ, ಏಕೆ ? ” ಎಂದಳು ಗೆಳತಿ.

“ ಏಕಿಲ್ಲ, ಹಾಗೇ ಸುಮ್ಮನೆ. ” ಅಕಾರಣವಾದ ನಾಚಿಕೆಯೊಡನೆ ತರುಣಿ ನುಡಿದಳು. ಆ ಅಪರಿಚಿತ ವ್ಯಕ್ತಿಯ ಅಸಭ್ಯತೆಯನ್ನು ಗೆಳತಿ ಯೆದುರು ವ್ಯಕ್ತಗೊಳಿಸಲಿಲ್ಲ.

ಆ ಮನುಷ್ಯನನ್ನು ಅರಿತುಕೊಳ್ಳುವ ಕುತೂಹಲವು ಮಾತ್ರ ತರುಣಿಯ ಮನವನ್ನು ಪೀಡಿಸಲಾರಂಭಿಸಿತು. ಅವಳು ನೂರು ಕೆಲಸಗಳ ನೆವದಿಂದ ಸುತ್ತಿ ಸುಳಿದಾಡುತ್ತ ವೀರೇಂದ್ರನನ್ನು ತನ್ನ ಕಣ್ಣಳವಿನಲ್ಲಿ ಇರಿಸಿಕೊಳ್ಳುತ್ತಲಿ ದ್ದಳು. ಗುರುತು ತಿಳಿದುಕೊಳ್ಳುವ ಮೊದಲೇ ಅವನು ಮಂದಿಯ ಗದ್ದಲ ದೊಳಗೆ ಕಳೆದು ಹೋದಾನು ಎಂದು.

ಗಂಡಿನ ಬೀಗರ ಊಟ ಮುಗಿದ ಮೇಲೆ ತರುಣಿ ನೋಡಿದಳು. ಆ ಮನುಷ್ಯ ಅತ್ಯಂತ ಸಪ್ರತಿಭ ಭಾವದಿಂದ ತನ್ನ ಹತ್ತಿರಕ್ಕೇ ಬಂದು ನಗುತ್ತ ನಿಂತ. ಅವಳು ನಾಚಿಕೆಯಿಂದ ಕೆಂಪೇರಿ ಓಡಿ ಹೋಗಲು ಉಜ್ಜುಗಿಸಿದಳು. ಆಗ ಹಿಂದಿನಿಂದ ವಿನಂತಿಯ ಸ್ವರ ಅವಳ ಕಿವಿಯನ್ನು ಸೇರಿತು.

“ ನನ್ನನ್ನು ಸ್ವಲ್ಪ ವಾಸರ ಗೃಹಕ್ಕೆ ಕರೆದೊಯ್ಯುವಿರಾ ? ”

ಮನೆಯೊಳಗೆ ಇಷ್ಟೊಂದು ಜನ ಇದ್ದಾರೆ, ನನಗೇ ಏಕೆ ಈ ವಿಜ್ಞಾ

ಪನೆ? ಈ ವಿಚಾರ ಮಾಡುತ್ತಲೂ ತರುಣಿ ನಾಚಿಕೆಯಿಂದ ಇನ್ನಷ್ಟು ಕೆಂಪಾದಳು. “ ಬರ್ರಿ ” ಎಂದೊಂದೇ ನುಡಿ ನುಡಿದು, ವೀರೇಂದ್ರನಿಗೆ ದಾರಿಯನ್ನು ತೋರುತ್ತ ಮುಂದೆ ಮುಂದೆ ನಡೆದಳು.

ವೀರೇಂದ್ರ ಕೋಣೆಯ ಬಾಗಿಲಿಗೆ ಹೋಗಿ “ ಅಣ್ಣಾ ” ಎಂದು ಕೂಗಿದ.

“ ಯಾರು, ವೀರೇಂದ್ರನೆ ? ಏನು ? ”

“ ನಾನು ಮನೆಗೆ ಹೋಗುತ್ತೇನೆ; ಹೇಳಿ ಹೋಗಲಿಕ್ಕೆ ಬಂದೆ. ”

“ ನಾಳೆ ಮುಂಜಾನೆ ಮತ್ತೆ ಬಾ ”

“ ಬರುತ್ತೇನೆ. ”

ಹೊರಡುವ ಸಮಯದಲ್ಲಿ ಒಮ್ಮೆ ಯಾರನ್ನೋ ಹುಡುಕುವಂತೆ ವ್ಯಗ್ರ ದೃಷ್ಟಿಯಿಂದ ಸುತ್ತಲೂ ನೋಡಿದ. ಅವನಿಗೆ ದಾರಿ ತೋರಿಸುವವಳು ಕನ್ನೆಯ ಪಕ್ಕದಲ್ಲಿ ನಗುತ್ತ ಕುಳಿತಿದ್ದಳು. ವೀರೇಂದ್ರನಿಗೆ ಮತ್ತೂ ಹಾದಿ ತೋರಿಸಿ ಕರೆದುಕೊಂಡು ಹೋಗಲು ಅವಳಿಗೇನೂ ಆಗ್ರಹವಿದ್ದಂತೆ ತೋರಲಿಲ್ಲ. ಅಸಹಾಯನಾದ ವೀರೇಂದ್ರ ಉಪಾಯವಿಲ್ಲದೆ ಒಬ್ಬನೇ ಹೇಗೋ ಹಾದಿ ಮಾಡಿಕೊಂಡು ಹೊರಗೆ ಹೋದ.

ಅಣ್ಣನಿಂದ ಬೀಳ್ಕೊಂಡೇನೋ ವೀರೇಂದ್ರ ಬಂದ. ಆದರೆ ಮನೆಗೆ ಹೋಗಬೇಕೆಂಬ ಆತುರವೇನೂ ನಡತೆಯಲ್ಲಿ ಕಾಣಲಿಲ್ಲ. ಅಕಸ್ಮಾತ್, ಗುರುತಿನವರೆಲ್ಲರನ್ನೂ ಹುಡುಕಿ ಹುಡುಕಿ ಮಾತನಾಡುವ ಪ್ರವೃತ್ತಿ ಅವನಲ್ಲಿ ಒಳ್ಳೇ ಪ್ರಬಲವಾಗಿಬಿಟ್ಟಿತು. ಆದರೆ ಪೂರ್ಣ ಮನಸಿನಿಂದ ಮಾತಿನಲ್ಲಿ ತೊಡಗಿರುವುದೂ ಅಸಾಧ್ಯವಾಯಿತು. ಯಾರನ್ನೋ ಕೊನೆಗೊಮ್ಮೆ ನೋಡಬೇಕೆಂಬ ಆಸೆಯಿಂದ ಅವನ ಕಣ್ಣುಗಳು ಅವಿರತವಾಗಿ ಸುತ್ತಲೂ ಎಡೆಯಾಡುತ್ತಿದ್ದವು.

ತುಸ ಹೊತ್ತಿನಲ್ಲಿ ಆ ತರುಣಿ ವೀರೇಂದ್ರನ ಎದುರಿನಲ್ಲಿ ಹಾಯ್ದು ಹೋದಳು. ಈಗವಳು ಬಹಳ ವ್ಯಸ್ತಳಾಗಿ ಬಿಟ್ಟಿದ್ದಳು. ಉಗ್ರಾಣಕ್ಕೊಮ್ಮೆ, ವಾಸರ ಗೃಹಕ್ಕೊಮ್ಮೆ, ಅಂಗಳಕ್ಕೊಮ್ಮೆ, ಪಡುಸಾಲೆಗೊಮ್ಮೆ ತೆರಪಿಲ್ಲದೆ ಅಲೆದಾಡುವುದು ಅವಳಿಗೆ ಬಿಡದ ಕರ್ಮವಾಗಿ ಬಿಟ್ಟಿತ್ತು. ವ್ಯಸ್ತಳಾಗುವಂತಹ ಪ್ರಸಂಗವೇ—ಕಾರ್ಯವಿದ್ದ ಮನೆಯಲ್ಲಿ ಕೆಲಸದ ಮನುಷ್ಯಳಲ್ಲವೆ !

ರಾತ್ರಿ ಗಭೀರವಾಗುತ್ತ ಬಂತು. ನಿಮಂತ್ರಿತ ಅತಿಥಿಗಳು ತಮ್ಮ

ತಮ್ಮ ಮನೆಗೆ ಹೋಗತೊಡಗಿದರು. ವೀರೇಂದ್ರ ಇನ್ನು ನಿಲ್ಲುವುದಶಕ್ಯ. ಅಲ್ಲದೆ, ನಿದ್ದೆ ಬಂದ ಹುಡುಗನೊಬ್ಬ ಕಣ್ಣುಜ್ಜುತ್ತ, "ವೀರೇಂದ್ರಣ್ಣ, ನೀನು ಯಾವಾಗ ಮನೆಗೆ ಹೋಗುತ್ತೀ ?" ಎಂದು ಕಾತರ ಕಂಠದಿಂದ ಕರೆಯುತ್ತಿದ್ದ ಬೇರೆ.

ವೀರೇಂದ್ರ ಬಾಲಕನ ಮಾತಿಗೇನೋ "ನಡೆ, ಇನ್ನು ಹೋಗೋಣ" ಎಂದ. ಅವನ ಕಣ್ಣುಗಳು ಮಾತ್ರ ಮೌನಭಾಷೆಯಲ್ಲಿ ವ್ಯಾಕುಲತೆಯಿಂದ ಯಾರಿಂದಲೋ ನಿರೋಪವನ್ನು ಪ್ರಾರ್ಥಿಸುತ್ತಿದ್ದವು. ತರುಣಿ ಕತ್ತನ್ನು ತಗ್ಗಿಸಿಕೊಂಡು ಅಲ್ಲಿಂದ ಹೊರಟುಹೋದಳು.

೨

ವೀರೇಂದ್ರ ಮಲಗಿಕೊಂಡಾಗ ಅವನ ತಲೆಯಲ್ಲಿ ಸುತ್ತಿ ಸುಳಿಯುತ್ತಿದ್ದುದು ಒಂದೇ ಮಾತು. 'ಎಂತಹ ಅಂದವಾದ ಹುಡುಗಿ! ಹುಡುಗಿ ಯಾರು ?' ಮದುವೆಯ ಮನೆಯೆಂದರೆ ಎಲ್ಲೆಲ್ಲಿಯ ಜನ ಬಂದಿರುತ್ತಾರೋ. ಒಂದು ರಾತ್ರಿ ನೆರೆದು, ಬೆಳಗಾಗುವುದೇ ತಡ, ಹರಿದು ಹಂಚಿ ಹೋಗುತ್ತಾರೆ. ತಿರುಗಿ ಅವರನ್ನು ಎಂದಾದರೂ ಕಾಣುವೆವೋ ಇಲ್ಲವೋ ಯಾರಿಗೆ ಗೊತ್ತು ? ಕಾಣದಿರುವ ಸಂಭವವೇ ನೂರಕ್ಕೆ ತೊಂಬತ್ತೊಂಬತ್ತು. ಆದರೂ ವೀರೇಂದ್ರನಿಗೆ ನಿದ್ದೆ ಬಾರದೆ ಆ ಅಪರಿಚಿತಳ ಧ್ಯಾನದಲ್ಲಿಯೇ ಬೆಳಕು ಹರಿಯಿತು.

ಬೆಳಗಾಗುತ್ತಲೂ ಎದ್ದವನೇ ವೀರೇಂದ್ರ ತಮ್ಮಣ್ಣನ ಮಾವನ ಮನೆಗೆ ಹೋದ. ಮನೆಯ ಹೊಸತಿಲೊಳಗೆ ಕಾಲಿಡುತ್ತಿದ್ದುತ್ತಲೇ ಅವನ ಅಂತ-ರಂಗವು ಆಂದೋಲಿತವಾಯಿತು. ಅವಳ ದರ್ಶನವಾದರೆ ? ಆಗದೆ ಹೋದರೆ ?

ವೀರೇಂದ್ರ ನಡುಮನೆಯಲ್ಲಿ ಹೋಗಿ ಕುಳಿತ. ಅವನ ಚಿತ್ತವು ಮತ್ತೆ ಮತ್ತೆ ಅಂತಃಪುರದ ಕಡೆಗೆ ಹಣಿಕಿ ನೋಡುತ್ತಲಿತ್ತು. ಆ ತರುಣಿ ಮನೆಯೊಳಗಿಲ್ಲ, ಅವಳ ದರ್ಶನವಿನ್ನು ಆಗುವುದು ಸಾಧ್ಯವಿಲ್ಲ ಎಂಬುದು ತಿಳಿದರೂ ಸಾಕು, ಅವನು ನಿಶ್ಚಿಂತತೆಯ ಉಸಿರ್ಗರೆದು ಸ್ವಸ್ಥನಾಗಬಹುದಿತ್ತು.

ಹೊತ್ತಾಯಿತು. ವರ-ಕನ್ನೆಯರನ್ನು ಕಳುಹಿಕೊಡುವ ಏರ್ಪಾಡಿನಲ್ಲಿ ಎಲ್ಲರೂ ತೊಡಗಿಕೊಂಡಿದ್ದರು. ಬೀಳ್ಕೊಡುವ ಸಮಯ ಸಮೀಪಿಸಿದಂತೆಲ್ಲ ವೀರೇಂದ್ರನ ಚಿತ್ತವೂ ಹೆಚ್ಚು ಹೆಚ್ಚು ಚಂಚಲವಾಗತೊಡಗಿತು.

ವೀರೇಂದ್ರ ಹೋಗುವ ಮೊದಲು ಬಾಯಿಸವಿ ಮಾಡಿಕೊಂಡು ಹೊರಡ ಬೇಕು; ಅದಕ್ಕಾಗಿ ಅಲ್ಲಿಂದೊಮ್ಮೆ ಎದ್ದು ಮನೆಯೊಳಗೆ ಹೋಗಬೇಕು. ಅದ ರಿಂದ ವೀರೇಂದ್ರನ ಎದೆಯಲ್ಲಿ ಆನಂದ ಉದ್ರೇಕ ದಿಗಿಲು ಎಲ್ಲವೂ ಏಕಕಾಲ ದಲ್ಲಿ ಕೂಡಿ ಧಕ್ ಧಕ್ಕೆನ್ನಲಾರಂಭವಾಯಿತು.

“ ಒಲ್ಲೆ ಒಲ್ಲೆ, ಬೇಡ ಬೇಡ, ಇಷ್ಟು ಮುಂಜಾನೆ ಹೊತ್ತಿನಲ್ಲಿ........” ಮೊದಲಾದ ವಾಡಿಕೆಯ ಒಣ ಮಾತುಗಳು ವ್ಯರ್ಥವಾದುದರಿಂದ, ವೀರೇಂ ದ್ರನು ಗತ್ಯಂತರವಿಲ್ಲವೆಂಬಂತೆ ಎದ್ದು ಒಳಗೆ ಹೋದ. ಅವನ ಅಂತರಂಗ ದಲ್ಲಿ ತುಮುಲ ನಡೆದಿತ್ತು.

ಅಂತಃಪುರದೊಳಗೆ ಅಡಿಯಿಡುತ್ತಲೇ ವೀರೇಂದ್ರನ ಅಣ್ಣನ ಅತ್ತೆ ಎಂದರು: “ ಬಾ ತಮ್ಮಾ, ಬಾ. ನೀನು ಮನೆಯ ಹುಡುಗ; ಹೀಗೆ ಹೊರ ಗಿಂದ ಹೊರಗೇ ಕೂತು ಹೋಗಬೇಕೆ ? ಬಾ, ಕೋಣೆಯೊಳಗೆ ಬಾ. ”

ಆ ಕೋಣೆಯಲ್ಲಿಯೆ ವರ-ಕನ್ನೆ ಕುಳಿತಿದ್ದರು. ಅಲ್ಲದೆ ಇನ್ನೊಬ್ಬ ರಿದ್ದರು—ಯಾರನ್ನು ಕಾಣುವುದಕ್ಕೆ ವೀರೇಂದ್ರನ ಚಿತ್ತವು ಹಂಬಲಿಸು ತ್ತಿತ್ತೋ ಆ ತರುಣಿ ವೀರೇಂದ್ರನು ಒಳಗೆ ಹೋಗುತ್ತಲೂ ಅವಳು ಕತ್ತೆತ್ತಿ ನೋಡಿದಳು. ನಾಲ್ಕೂ ದೃಷ್ಟಿಗಳು ಮಿಲಿತವಾದ ಕೂಡಲೆ ವೀರೇಂದ್ರನ ಮುಖವು ಕಳೆಗೊಂಡಿತು. ತರುಣಿಯೂ ನಗೆಮೊಗವನ್ನು ತಗ್ಗಿಸಿದಳು.

ಜಮಖಾನೆಯ ಒಂದು ಕೊನೆಯಲ್ಲಿ ಕುಳಿತುಕೊಂಡ. ತರುಣಿ ಎದ್ದು ನಿಂತಳು. ಅವಳು ಎದ್ದುದನ್ನು ಕಂಡು ಯಜಮಾನಿನಿ, “ ಅಮ್ಮಾ, ಸುಕೂ, ವೀರೇನನಿಗೆ ಒಂದಿಷ್ಟು ತಿಂಡಿ ನೀರು ತಂದು ಕೊಡಮ್ಮ.” ಎಂದು ಹೇಳಿದಳು.

ಸುಕು ವೀರೇಂದ್ರನ ಕಡೆಗೆ ಮತ್ತೊಮ್ಮೆ ಚಕಿತ ದೃಷ್ಟಿಯನ್ನು ಬೀರಿ ಹೊರಟುಹೋದಳು. ಅವನು ಮೋರೆ ಕೆಳಗೆ ಮಾಡಿಕೊಂಡು ಕುಳಿತಿದ್ದ; ಆದರೂ ಆ ದೃಷ್ಟಿ ಅವನಿಗೆ ಕಾಣದೆ ಉಳಿಯಲಿಲ್ಲ.

ಕೊಂಚ ಹೊತ್ತಿನಲ್ಲಿಯೆ ಸುಕು ಒಂದು ತಟ್ಟೆಯಲ್ಲಿ ತಿಂಡಿಗಳನ್ನೂ

ಥಾಲಿಯಲ್ಲಿ ನೀರನ್ನೂ ತೆಗೆದುಕೊಂಡು ಬಂದಳು. ಅವಳು ಮಣಿದು ವೀರೇಂದ್ರನ ತೊಡೆಯ ಸಮೀಪದಲ್ಲಿ ಅವುಗಳನ್ನಿರಿಸಿದಳು.

ಎಷ್ಟು ಹತ್ತಿರ ! ಒಬ್ಬರೊಬ್ಬರ ಎದೆಯ ಬಡಿತವನ್ನೂ ಕೇಳಿರಬಹುದು. ಇಬ್ಬರನ್ನೂ ಲಜ್ಜೆಯಾವರಿಸಿ ಕೆಂಪಾದರು ಸುಕು ನೀಟಾಗಿ ಎದ್ದು ನಿಲ್ಲುವ ಹೊತ್ತಿಗೇ ವೀರೇಂದ್ರನು ಮೊಗವೆತ್ತಿ ನೋಡಿದ. ಮತ್ತೆ ನಾಲ್ಕು ನೋಟಗಳು ಸೇರಿದವು. ತರುಣಿಯ ದೃಷ್ಟಿ ಚಂಚಲವಾಯಿತು. ವೀರೇಂದ್ರನ ಮುಖದಲ್ಲಿ ನಗೆ ಬೆಳಗಿತು. ಚಾಂಚಲ್ಯದ ಹಾವಭಾವದೊಡನೆ ತರುಣಿ ಅವನ ಎದುರಿನಿಂದ ಸರಿದಳು.

ವೀರೇಂದ್ರನು ತಿಂಡಿಯನ್ನು ತಿನ್ನಲು ತೊಡಗಿದ. ಅವನ ಹೃದಯದೊಳಗೆ ಧ್ವನಿತವಾಗುತ್ತಲಿತ್ತು—ಸುಕು ! ಸುಕು ! ಸುಕು ಯಾವ ಹೆಸರಿನ ಅಪಭ್ರಂಶ ? ಸುಕುಮಾರಿ, ಸುಖಮಯಿ— ಅಲ್ಲವೆ ? ನಿಶ್ಚಯವಾಗಿ ಇವರ ಆತ್ಮೀಯಳು. ಅತ್ತಿಗೆಯಿಂದ ಖಂಡಿತವಾಗಿ ಇವಳ ವಿಷಯ ತಿಳಿಯುವುದೆಂದು ವೀರೇಂದ್ರನಿಗೆ ಎಷ್ಟೋ ಮಟ್ಟಿಗೆ ಸಮಾಧಾನವಾಯಿತು.

ವರ-ಕನ್ನೆಯರು ಕಳುಹಿಸಿಕೊಂಡರು. ಕಂಬನಿಗರೆಯುತ್ತಲಿದ್ದ ವಧುವನ್ನು ಬಂಡಿಯಲ್ಲಿ ಕುಳ್ಳಿರಿಸಲು ಬಂದಳು ನಗುಮೋರೆಯ ಸುಕು. ವೀರೇಂದ್ರನೊಡನೆ ಪುನಃ ಅವಳ ದೃಷ್ಟಿಸಂಗಮವಾಯಿತು ಮನೋಭವನ ಕಾರ್ಯಸಾಧನೆ.

೨

ಮನೆಗೆ ಬಂದ ಬಳಿಕ ಅತ್ತಿಗೆಯೊಡನೆ ಗುರುತು-ಸಲಿಗೆ ಬೆಳೆಯಿಸುವುದಕ್ಕಾಗಿ ವೀರೇಂದ್ರನ ಮನಸು ಅತ್ಯಂತ ವ್ಯಗ್ರವಾಯಿತು. ವಿಷಣ್ಣಳಾದ ವಧುವನ್ನು ಎಲ್ಲೆಲ್ಲಿಯ ಹೆಂಗುಸರೊ ಬಂದು ಸುತ್ತುವರಿದರು; ತೆರಪಿಲ್ಲದೆ ನಕ್ಕು-ಕೆಲೆದು ಮಾತನಾಡತೊಡಗಿದರು. ವೀರೇಂದ್ರನಿಗೆ ಅತ್ತಿಗೆಯೊಡನೆ ಮಾತನಾಡುವುದಕ್ಕೆ ಅವಕಾಶವೇ ಸಿಕ್ಕಲಿಲ್ಲ

ಅವನು ಮತ್ತೆ ಮತ್ತೆ ಕೆಲಸದ ನೆಪವನ್ನು ಹುಡುಕಿಕೊಂಡು ಅತ್ತಿಗೆಯ ಹತ್ತಿರ ಹೋಗುವ; ನೆಪ ತೆಗೆದು ಮಾತನಾಡಿಸುವ; ಅವಳಿಗೆ ಏನು ಬೇಕೆಂಬು

ದನ್ನು ಗಳಿಗೆಗಳಿಗೆಗೂ ಕೇಳಿಕೊಂಡು ಒದಗಿಸುವ. ಇಡೀ ದಿನ ಕಳೆದ ಮೇಲೆ, ಸಂಜೆಯ ಸಮಯದಲ್ಲಿ ಅತ್ತಿಗೆ ಒಬ್ಬೊಂಟಿಗಳಾಗಿರುವುದನ್ನು ಕಂಡು ಅವಳ ಬಳಿ ಹೋದ. "ಅತ್ತಿಗೆ, ಬಹು ದಿನಗಳ ಪರಿಚಯದ ಮನೆಯನ್ನು ಬಿಟ್ಟು, ಅಪರಿಚಿತರ ರಾಜ್ಯದಲ್ಲಿ ಬಂದು, ಮನವು ಬಹಳ ಭಾರವಾಗಿರುವುದು ಅಲ್ಲವೆ ? ಆದರೆ, ಕೆಲ ದಿನಗಳು ಕಳೆದ ಬಳಿಕ, ಈ ಪರಿಚಯವಿಲ್ಲದ ಮನೆಯನ್ನು ಬಿಟ್ಟು ಪರಿಚಯದ ಮನೆಗೆ ಹೋದರೆ, ಅಲ್ಲಿ ಹೇಗಿರಲಿ ಎಂಬಂತಾಗುತ್ತದೆ." ಎಂದು ವೀರೇಂದ್ರನು ನುಡಿದ.

ಅತ್ತಿಗೆಯ ಮೋರೆ ದುಃಖದಿಂದ ಮಲಿನವಾಗಿದ್ದರೂ ವೀರೇಂದ್ರನ ಮಾತನ್ನು ಕೇಳಿ ಲಜ್ಜೆಯಿಂದ ಕೆಂಪಾಗಿ ಅತ್ಯಂತ ಸುಂದರವಾಯಿತು. ಅವಳು ನಸುನಕ್ಕು ವೀರೇಂದ್ರನ ಕಡೆಗೆ ಸಕೌತುಕ ಕಟಾಕ್ಷವೊಂದನ್ನು ಬೀರಿ, "ಇಶ್ ಅದೇನು ಅಗಾಧ !" ಎಂದಳು.

"ನೋಡುವೆಯಂತೆ ನೀನು ಆವಾಗ—ನಾನು ಎಂಥ ಜ್ಯೋತಿಷಿಯೊ, ನಮ್ಮಣ್ಣ ಎಂಥ ಜಾದುಗಾರನೋ"

"ಹೋಗೋ" ಎಂದು ನಕ್ಕು ಅತ್ತಿಗೆ ಮುಖ ತಗ್ಗಿಸಿದಳು.

ಹೀಗೆಯೇ ಕೊಂಚ ಕೊಂಚವಾಗಿ ಲಜ್ಜೆಯ ಆವರಣವು ಸರಿದು ಇಬ್ಬರಲ್ಲಿಯೂ ಪರಿಚಯ ಹೆಚ್ಚಿತು.

"ಅತ್ತಿಗೆ, ನೀವು ಅಕ್ಕ-ತಂಗಿಯರು ಎಷ್ಟು ಜನ ?" ವೀರೇಂದ್ರನು ಒಂದು ದಿನ ವಿಚಾರಿಸಿದ.

"ನನಗೆ ಅಕ್ಕತಂಗಿಯರಿಲ್ಲ."

ವೀರೇಂದ್ರನು ತನ್ನ ಹೃದಯದ ಬಲವನ್ನೆಲ್ಲ ಒಂದುಗೂಡಿಸಿ, "ಹಾಗಾದರೆ ಆ ಹುಡುಗಿ,—ನಿಮ್ಮವ್ವ ಸುಕೂ ಎಂದು ಕರೆಯುತ್ತಿದ್ದರಲ್ಲ, ಆಕೆ—ಯಾರು ?" ಎಂದು ಪ್ರಶ್ನಿಸಿದ. ಇಂತಹ ಸಹಜ ಪ್ರಶ್ನೆಯನ್ನು ಕೇಳುವಾಗಲೂ ಏಕೋ ಅವನ ದನಿ ನಡುಗಿತು; ಎದೆ ಡಡದಡಿಸಿತು.

"ಆಕೆ ನಮ್ಮ ಸೋದರತ್ತೆಯ ಮಗಳು. ಆಕೆಗೆ ಅಪ್ಪ, ಅವ್ವ ಇಲ್ಲ; ನಮ್ಮ ಮನೆಯೊಳಗೇ ಇರುತ್ತಾಳೆ."

" ಆಕೆಯ ಸರಿಯಾದ ಹೆಸರೇನು ಅತ್ತಿಗೆ ? ಸುಕುಮಾರಿಯೆ ? "

" ಹೌದು. "

" ಮದುವೆಯಾಗಿದೆಯೆ ? "

ಅತ್ತಿಗೆ ಮುಗುಳು ನಗೆ ನಕ್ಕು ನುಡಿದಳು: " ಇಲ್ಲ. ಆದರೆ ನಿನಗದರ ಪ್ರಯೋಜನವಿಲ್ಲ. ನಿನಗಾಕೆ ಸಗೋತ್ರಳು. " ಅವಳ ಮುಖದ ಮೇಲೆ ದುಷ್ಟ ಕೌತುಕದ ನಗೆಮಿಂಚೊಂದು ಮಿಂಚಿಹೋಯಿತು.

ಅತ್ತಿಗೆಯ ಸ್ವಾಭಾವಿಕ ವಿನೋದವೂ ವೀರೇಂದ್ರನಿಗೆ ಸಹಜವಾಗಿ ಅರ್ಥವಾಗದೆ ಹೋಯಿತು. ಅವನು ಒಂದು ತರಹ ಗಂಭೀರನಾಗಿ ಬಿಟ್ಟ. ಚಟಕ್ಕನೆ ಎದ್ದು ನಿಂತು ಅವನೆಂದ: " ಅತ್ತಿಗೆ, ಆಯ್ತು; ನಿನಗೆ ಕೆಲವು ಪುಸ್ತಕ ತಂದು ಕೊಡುತ್ತೇನೆ. ಒಬ್ಬಳೇ ಇದ್ದಾಗ ಓದಲಿಕ್ಕಾಗುತ್ತದೆ. "

ವೀರೇಂದ್ರನು ತನ್ನ ಕೋಣೆಗೆ ಹೋಗಿ ಮಲಗಿಬಿಟ್ಟ. ಅವನ ಮನಸಿನೊಳಗೆ ಅತ್ತಿಗೆಯ ಮಾತು ನಿನದಿಸುತ್ತಲಿತ್ತು. ' ನಿನಗದರ ಪ್ರಯೋಜನವಿಲ್ಲ '

ಆಶೆಯೇ ವ್ಯರ್ಥವೆಂದ ಮೇಲೆ ವೀರೇಂದ್ರನು ತನ್ನನ್ನು ನಿಯಂತ್ರಿಸಿಕೊಳ್ಳಲು ಪ್ರಯತ್ನಿಸತೊಡಗಿದ. ಆ ಪ್ರಯತ್ನವೇ ಅವನ ಮನಸಿಗೊಂದು ಬಲೆಯಾಯಿತು. ಅವನ ಅಂತರಂಗದಿಂದ ಸುಕುಮಾರಿಯ ಸ್ಮೃತಿಯನ್ನು ತೊಲಗಿಸಲು ಕಾಲ್ತೊಡಕಾಯಿತು.

ಒಂದು ಸಪ್ತಾಹದ ತರುವಾಯ ವಧು ಮತ್ತೆ ತವರಿಗೆ ಹೋದಳು. ಜೊತೆಯಲ್ಲಿ ವೀರೇಂದ್ರನೂ ಹೋದ. ಮತ್ತೆ ಸುಕುಮಾರಿಯ ದೃಷ್ಟಿ-ಸಂಗಮ ಸಂಭವಿಸಿತು. ಅವಳು ನಗೆಯ ಬೆಳಕನ್ನು ಬೀರಿದಳು. ವೀರೇಂದ್ರನಿಗೆ ನಗಲಾಗಲಿಲ್ಲ. ಅವನ ಎದೆಯ ಮೇಲೆ ಭಾರವಾದ ಬಂಡೆಯನ್ನಿರಿಸಿದಂತಾಗಿತ್ತು.

ವೀರೇಂದ್ರನು ಬಂದನೆಂದು ಸುಕುಮಾರಿ ಕೋಣೆಯಿಂದ ಹೊರಡಲು-ದ್ಯುಕ್ತಳಾದಳು. ಅವಳ ಅಕ್ಕ ಅವಳನ್ನು ಗಟ್ಟಿಯಾಗಿ ಹಿಡಿದು ತಡೆದಳು. " ಏನೆ, ಎಲ್ಲಿ ಓಡಿ ಹೋಗುತ್ತೀ ? ಮೈದುನನನ್ನು ಕಂಡರೆ ನಿನಗಿನ್ನೂ ನಾಚಿಕೆಯೆ ? ನಾನು ಹೋಗಿ ಅಪ್ಪನನ್ನು ಮಾತಾಡಿಸಿಕೊಂಡು ಬರುತ್ತೇನೆ.

ಅಲ್ಲಿಯ ವರೆಗೆ ಈತನೊಂದಿಗೆ ಮಾತನಾಡುತ್ತ ಕುಳಿತಿರು ನೀನು." ಎಂದು ವಧು ಹೊರಟುಹೋದಳು.

ಒಂದು ಕೋಣೆಯಲ್ಲಿ ಇಬ್ಬರೇ—ವೀರೇಂದ್ರ ಮತ್ತು ಸುಕುಮಾರಿ. ವಿಧಾತನ ಪರಿಹಾಸ ! ಏನು ಮಾತಾಡಬೇಕೆಂಬುದು ಇಬ್ಬರಲ್ಲಿ ಯಾರಿಗೂ ತೋಚಲೊಲ್ಲದು. ಸುಕುಮಾರಿ ನಾಚಿಕೆಯಿಂದ ಮುಖ ಬಾಗಿಸಿಕೊಂಡು ಉಂಗುಟದಿಂದ ನೆಲವನ್ನು ಕೆರೆಯತೊಡಗಿದಳು; ವೀರೇಂದ್ರ ಕೈಬೆರಳಿಗೆ ಕರವಸ್ತ್ರವನ್ನು ಸುತ್ತಿ ಸುತ್ತಿ ಬಿಚ್ಚಿ, ಬಿಚ್ಚಿ ಬಿಚ್ಚಿ ಸುತ್ತತೊಡಗಿದ. ಅವರಿಬ್ಬರಿಗೂ ಬಹಳ ಬಹಳ ಮಾತುಗಳನ್ನಾಡುವುದಿತ್ತು; ಎಂತಲೇ ಒಂದು ಮಾತೂ ಹೊರಡದಂತಾಗಿತ್ತು.

ಒಂದೆಡೆಯಲ್ಲಿ ಇಬ್ಬರು ಸೇರಿದ್ದಾರೆ, ಆದರೂ ಯಾವ ಮಾತುಕತೆಯೂ ಇಲ್ಲ. ಇಂತಹ ಅವಸ್ಥೆ ಇಬ್ಬರಿಗೂ ಅಸ್ವಾಸ್ಥ್ಯಕರವಾಗಿ ಲಜ್ಜಾಜನಕವಾಗಿ ಪರಿಣಮಿಸಿತು. ಆಗ ತಮ್ಮನ್ನು ಯಾವುದೊಂದು ಕೆಲಸದಲ್ಲಿ ತೊಡಗಿಸುವ ಉದ್ದೇಶದಿಂದ ಸುಕುಮಾರಿ ಒಂದು ತಟ್ಟೆಯಲ್ಲಿ ಉಪಹಾರವನ್ನು ತಂದು ವೀರೇಂದ್ರನ ಹತ್ತಿರ ಇರಿಸಿದಳು. ವೀರೇಂದ್ರನು ಈಗಲೂ ಯಾವ ಮಾತನ್ನೂ ಆಡಲಿಲ್ಲ. ಅವಳ ಮೊಗದ ಕಡೆ ನೋಡಿ ನಸುನಕ್ಕನಷ್ಟೆ; ತಿಂಡಿಗೆ ಕೈಹಚ್ಚಲಿಲ್ಲ.

ತುಸ ಹೊತ್ತಿನ ತರುವಾಯ ಸುಕುಮಾರಿ ಆ ಕಡೆ ನೋಡಿದಳು. ವೀರೇಂದ್ರನು ಸುಮ್ಮನೆ ಕುಳಿತುದನ್ನರಿತು, ಮೆಲುದನಿಯಲ್ಲಿ ಅವಳೊಂದು ಪುಟ್ಟ ನುಡಿಯನ್ನು ಉಚ್ಚರಿಸಿದಳು: " ತಿನ್ನಿರಿ. "

" ಓ, ನನಗೆ ತಿನ್ನಲಿಕ್ಕೆಂದು ಇಟ್ಟಿದ್ದಿರೇನೋ ಅಲ್ಲವೇ ? " ವೀರೇಂದ್ರನು ನಕ್ಕು ನುಡಿದ.

ಈ ಮಾತನ್ನು ಕೇಳಿ ಸುಕುಮಾರಿಗೆ ಅತ್ಯಂತ ಕೌತುಕವೆನಿಸಿತು. "ತಾವು ಏನೆಂದು ತಿಳಿದುಕೊಂಡಿದ್ದಿರಿ ? " ಎಂದು ಕೇಳಿದಳು.

" ತಾವು ಏನೂ ಹೇಳಲೇ ಇಲ್ಲ. ಇವುಗಳನ್ನು ತಾವೇ ತಿನ್ನುವುದಕ್ಕೆ ತಂದಿಟ್ಟುಕೊಂಡಿರಬಹುದೇನೋ ಎಂದುಕೊಂಡಿದ್ದೆ. "

" ಹೋಗಿರಿ, ಏನಾದರೂ ಹೇಳುತ್ತೀರಿ ಅಯ್ಯು. " ಸುಕುಮಾರಿ ಪರಾಜಿತಳಾಗಿ ನುಡಿದಳು.

ಪರಸ್ಪರ ಅಂತರಂಗದ ಪರಿಚಯವಾಗಿದ್ದವರ ಲೌಕಿಕ ಸಂಕೋಚದ ಬಂಧನವೊಮ್ಮೆ ಹರಿದುಬಿಟ್ಟಿತೆಂದರೆ, ಆಮೇಲೆ ಭಾವದ ಪ್ರವಾಹವನ್ನು ತಡೆಯುವುದು ಸಹಜವಲ್ಲ. ಆದರಲ್ಲಿಯೂ ಇವರದು ಹುಡುಗಾಟಿಕೆಯ ಸಂಬಂಧ· ಶೀಘ್ರವೇ ಪರಿಚಯ ಬೆಳೆದುಬಿಟ್ಟಿತು.

ನವವಧು ಮೇಲಿಂದ ಮೇಲೆ ಅತ್ತೆಮನೆಯಿಂದ ತವರುಮನೆಗೆ, ತವರುಮನೆಯಿಂದ ಅತ್ತೆಯ ಮನೆಗೆ ಹೋಗುವುದು ಬರುವುದು ಮಾಡುತ್ತ ನೂತನ ಪರಗೃಹವಾಸವನ್ನು ಮಯ್ಯುಣಿಸಿಕೊಳ್ಳುತ್ತಲಿದ್ದಳು. ಪ್ರತಿಸಲವೂ ಅತ್ತಿಗೆಯನ್ನು ಕಳಿಸಲಿಕ್ಕೆ ಹೋಗುವುದು, ಕರೆದುಕೊಂಡು ಬರುವುದು ವೀರೇಂದ್ರನಿಗೆ ಹತ್ತಿದ ಕೆಲಸ. ಅವನಿಗೆ ಈ ಕರ್ತವ್ಯವನ್ನು ನೆರವೇರಿಸುವುದರಲ್ಲಿ ಒಳ್ಳೇ ಉತ್ಸಾಹ.

ಈ ಎಡೆತಾಕುವಿಕೆಯಲ್ಲಿ ವೀರೇಂದ್ರ ಸುಕುಮಾರಿಯರ ಸಂಬಂಧ ಅವರಿಗೆ ತಿಳಿಯದಂತೆಯೆ ತುಂಬ ಘನಿಷ್ಠವಾಗಿ ಬಿಟ್ಟಿತು. ಒಬ್ಬ ಹೆಣ್ಣುಮಗಳನ್ನು ಹೆಸರುಗೊಂಡು ಕರೆಯುವುದೆಂದರೆ ಅನಿವಾರ್ಯ ಸಂಕೋಚವಾಗುತ್ತದೆ. ಎಂತಲೇ ವೀರೇಂದ್ರನೊಂದು ದಿನ ಸುಕುಮಾರಿಯನ್ನು ಕೇಳಿದ: " ತಮ್ಮೊಡನೆ ಏನಾದರೊಂದು ಆಪ್ತತ್ವವನ್ನು ಗೊತ್ತುಮಾಡಿಕೊಳ್ಳುವುದು ಲೇಸು. ಇಲ್ಲದಿದ್ದರೆ ತಮ್ಮನ್ನು ನಾನು ಏನೆಂದು ಕರೆಯಲಿ ? "

" ವೀರೇನ, ನೀನು ನನಗೆ ' ನೀನು ' ಎಂದೆನ್ನುತ್ತೀ, ನನ್ನ ತಂಗಿಗೆ ' ತಾವು ' ಎನ್ನುತ್ತೀ. ಒಳ್ಳೇ ಚೆನ್ನಾಗಿದೆ ! " ಎಂದಳು ಅತ್ತಿಗೆ.

ವೀರೇಂದ್ರನು ನಕ್ಕು ಉತ್ತರವಿತ್ತ: " ನೀನು ನನ್ನ ಅತ್ತಿಗೆ, ನಿನ್ನನ್ನು 'ನೀನು' ಎಂದರೆ ಚೆಂದ ಕಾಣುತ್ತದೆ. ಇವರನ್ನು 'ನೀನು' ಎನ್ನುವುದು ಯಾವ ಸಂಬಂಧದಿಂದ ? "

" ಇವಳನ್ನು ಮಿತ್ರಳೆಂದು ' ನೀನು ' ಎನ್ನಬೇಕು. ಈಕೆ ನಿನ್ನ ಮಿತ್ರೆ. ಏನೆಂದೆ ? "

“ ಹಾಂ, ಸರಿ ಸರಿ. ಇವರು ನನ್ನ ಮಿತ್ರರು. ವೀರೇಂದ್ರನು ಉತ್ಸಾಹಿತನಾಗಿ ನುಡಿದ.

ವೀರೇಂದ್ರನ ಈ ಉತ್ಸಾಹವು ಸುಕುಮಾರಿಯನ್ನು ಲಜ್ಜಿತಳನ್ನಾಗಿ ಮಾಡಿತು.

ಬರುಬರುತ್ತ ಈ ಗೆಳೆತನವೂ ಸಹಜವಾಯಿತು. ಅವರ ಆತ್ಮೀಯತೆ ಘನಿಷ್ಠತರವಾಯಿತು. ಒಂದು ದಿನ ವೀರೇಂದ್ರನನ್ನು ನೋಡದಿದ್ದರೆ ಸುಕುಮಾರಿಯ ಮನಸಿಗೆ ಬೇಸರವಾಗಬೇಕು, ಅವಳನ್ನು ಕಾಣದಿದ್ದರೆ ಅವನ ಮನಸು ಹುರು ಹುರು ಎನ್ನಬೇಕು—ಅಷ್ಟು ಪರಸ್ಪರ ಆಸಕ್ತಿ ಬೆಳೆಯಿತು. ದಿನ ದಿನವೂ ಬೀಗರ ಮನೆಗೆ ಹೋಗುವುದಕ್ಕೂ ಆಗುವುದಿಲ್ಲ. ಏನಾದರೂ ನೆಪ ಹುಡುಕಬೇಕಾಗುತ್ತದೆ, ಇಲ್ಲವೆ, ಬಹಳ ದಿವಸಗಳಿಗೊಮ್ಮೆ ಹೋಗಬೇಕಾಗುತ್ತದೆ. ಆದರೆ ಜೀವ ಚಡಪಡಿಸಿ ಕಂಗಾಲಾಗುವುದು. ವೀರೇಂದ್ರನು ಹೋದ ದಿನ “ ಮತ್ತೆ ಯಾವಾಗ ಬರುವಿರಿ ? ” ಎಂದು ಸುಕುಮಾರಿ ಕೇಳುವಳು. “ ನಾಳೆ ” ಎಂದೆನ್ನಬೇಕೆಂದು ಅವನ ಮನಸಿನ ಅಪೇಕ್ಷೆ. ಆದರೆ ನಿಗ್ರಹಿಸಿಕೊಂಡು ಬಾಯಿಂದ “ ಇದೇ ಶುಕ್ರವಾರ ” ಎಂದು ಹೇಳುವ. ಮುಂದೆ ಆ ಶುಕ್ರವಾರದ ನಿರೀಕ್ಷಣೆಯಲ್ಲಿ ಅವರಿಬ್ಬರೂ ಎಂತಹ ಮನೋವೇದನೆಯಲ್ಲಿ ದಿನಕಳೆಯುತ್ತಿದ್ದರೆಂಬುದನ್ನು ಕಂಡುಂಡವರೇ ಬಲ್ಲರು.

ಕೆಲ ದಿನಗಳಲ್ಲಿ ಸುಕುಮಾರಿ ಜ್ವರಬಾಧೆಯಿಂದ ಮಲಗಿದಳು. ಆಗ, ಹಗಲಿರುಳೂ ತಾನು ಆಕೆಯ ಹಾಸಿಗೆಯ ಪಕ್ಕದಲ್ಲಿ ಕುಳಿತುಕೊಂಡು ಆರೈಕೆ ಮಾಡಬೇಕು, ಅವಳಿಗೆ ತಾನೇ ಔಷಧ ಪಥ್ಯಗಳನ್ನು ಕೊಡಬೇಕು, ಅವಳ ಮನಸಿಗೆ ಸಂತೋಷವಾಗುವಂತೆ ಮಾಡಬೇಕು ಎಂದು ವೀರೇಂದ್ರನ ಮನಸು ಹಂಬಲಿಸುವುದು. ಆದರೆ ಏನೋ ಒಂದು ಬಗೆಯ ಸಂಕೋಚವು ಅಡ್ಡ ಬರುತ್ತಲಿತ್ತು.

“ ವೀರೇನ್, ನಮ್ಮ ಸುಕೂನನ್ನು ನೋಡಿ ಏನಾದರೂ ಔಷಧ ಕೊಡಪ್ಪಾ. ನೀನು ಮನೆಯಲ್ಲಿಯೇ ಡಾಕ್ಟರಿರಲಿಕ್ಕೇ ಮಂದಿಯನ್ನೇಕೆ ಕರೆಯಬೇಕು ? ” ಎರಡು ಮೂರು ದಿನಗಳ ತರುವಾಯ ಅತ್ತಿಗೆ ವೀರೇಂದ್ರನಿಗೆ ಎಂದಳು.

ಸರಿ. ವೀರೇಂದ್ರನು ಮನಮುಟ್ಟಿ ಹುರುಪಿನಿಂದ ಸುಕುಮಾರಿಗೆ ಔಷಧೋಪಚಾರ ನಡೆಯಿಸಿದ. ರೋಗಿಯ ನಾಡಿಯನ್ನು ನೋಡುವಾಗ ಅವಳ ಕೈ ಡಾಕ್ಟರನ ಕೈಯಲ್ಲಿ ಬಹಳ ಹೊತ್ತಿನ ವರೆಗೆ ಇದ್ದುಬಿಡುತ್ತಿತ್ತು. ಡಾಕ್ಟರನ ಬೆರಳುಗಳು ರೋಗಿಯ ನಾಡಿಗಳ ಮೇಲೆ ಆಡುತ್ತಿದ್ದಾಗ ರೋಗಿಯ ಅಂತರ್ವೀಣೆಯ ತಂತಿಗಳನ್ನು ಮಿಡಿದಂತಾಗುತ್ತಿತ್ತು. ಡಾಕ್ಟರು ಟಿಙ್ಚರ್‌ಕೊಲೊರೋಫಾರ್ಮ್ ಯೋಜಿಸುವ ಪೂರ್ವದಲ್ಲಿ ರೋಗಿ-ಡಾಕ್ಟರರಿಬ್ಬರ ಪ್ರಾಣಗಳನ್ನೂ ಕೊಲೊರೋಫಾರ್ಮಿನ ಆವೇಶ ಆವರಿಸುತ್ತಿತ್ತು. ಪ್ರಿಸ್‌ಕ್ರಿಪ್ಶನ್ ಬರೆಯ್ಯ ಹೋದ ಡಾಕ್ಟರ್ ಮನಮರೆದು ಏನನ್ನೋ ಬರೆದುಬಿಡುತ್ತಿದ್ದ—

‘ ಯಾವ ದೇವಶಿಲ್ಪಿಯ ಸಂತಾನವು
ಆನಂದಮಯಾಕೃತಿ ನೀನು !
ಸ್ಪರ್ಶದ ಮಧುರತೆಯಮೃತಸಮಾನವು
ದಿವ್ಯದ್ಯುತಿಯಾಂತಿವೆ ಕಣ್ಣು ! ’

ಈ ವ್ಯವಸ್ಥೆ ರೋಗಿಗೂ ಪರಮ ರಸಾಯನವೆಂದೇ ಎನಿಸುತ್ತಿತ್ತು. ಇಂತಹ ಒಳ್ಳೆಯ ಚಿಕಿತ್ಸೆಯಿಂದ ರೋಗಿಗೆ ಶೀಘ್ರವೇ ಗುಣವಾಯಿತು. ಡಾಕ್ಟರು ಮೇಲಿಂದ ಮೇಲೆ ಎಡೆತಾಕುವ ಆಗತ್ಯವುಳಿಯಲಿಲ್ಲ.

ಕೆಲವು ದಿನಗಳ ಮೇಲೆ ಒಮ್ಮೆ ವೀರೇಂದ್ರನು ಅತ್ತಿಗೆಯನ್ನು ತವರು ಮನೆಗೆ ಕಳಿಸಲು ಹೋಗಿದ್ದ. ವೀರೇಂದ್ರ ಸುಕುಮಾರಿ ಇಬ್ಬರೇ ಕುಳಿತುಕೊಂಡು ಮಾತನಾಡುತ್ತಿದ್ದರು.

“ ನೋಡು ಗೆಳತಿ, ಬೇಗನೆ ನಿನ್ನ ಮದುವೆಯಾಗುವುದು, ಆದರೆ ನನ್ನೊಂದಿಗಲ್ಲ, ಇದು ಖಂಡಿತ. ಯಾರೊಡನೆಯೋ ಆಗಲಿ, ನಾನ್ನು ಕೊನೆಯ ವರೆಗೂ ನಿನ್ನ ಗೆಳೆಯನಾಗಿರುವೆ. ನೀನು ನಿನ್ನ ಗಂಡನ ಪರಿಚಯವನ್ನು ನನಗೆ ಮಾಡಿಕೊಡಬೇಕು. ” ವೀರೇಂದ್ರ ಹಠಾತ್ತನೆ ನುಡಿದ.

ಸುಕುಮಾರಿ ತಟ್ಟನೆ ಮುಖ ತಿರುಗಿಸಿ ಅಲ್ಲಿಂದೆದ್ದು ಹೊರಟು ಹೋದಳು.

ವೀರೇಂದ್ರ-ಸುಕುಮಾರಿಯರ ಮಿಲನವು ದುರ್ಘಟವೆಂದೇ ಪ್ರಣಯವು ಕ್ರಮಕ್ರಮವಾಗಿ ಹೆಚ್ಚು ಪ್ರಗಾಢವಾಯಿತು. ವೀರೇಂದ್ರನ ಅತ್ತಿಗೆ ಈಗೀಗ

ಪ್ರಣಯ ವ್ಯಾಪಾರದಲ್ಲಿ ಹೊಸ ತಿಳಿವಳಿಕೆಯನ್ನು ಪಡೆಯುತ್ತಲಿದ್ದಳು. ಅವಳಿಗೆಲ್ಲವೂ ಗೊತ್ತಾಯಿತು. ಅವಳೊಮ್ಮೆ ಸುಕುಮಾರಿಗೆಂದಳು: " ಏನೇ, ಹೀಗೆ ಎಂದಾದರೂ ಆತ್ಮಹತ್ಯೆ ಮಾಡಿಕೊಳ್ಳಬೇಕೆ ? "

ಸುಕುಮಾರಿ ಅತ್ತುಬಿಟ್ಟಳು. ಅವಳ ಅಕ್ಕನು ಅವಳನ್ನು ತೊಡೆಯ ಮೇಲೆ ಸೆಳೆದುಕೊಂಡು ಬೆನ್ನ ಮೇಲೆ ಕೈಯಾಡಿಸತೊಡಗಿದಳು. ಅವಳ ಕಣ್ಣೊಳಗೂ ಕಂಬನಿಗಳ ಹೊಳೆ ಹೊರಟಿತು.

ಸುಕುಮಾರಿಯ ಮದುವೆಯ ಬಗ್ಗೆ ಮಾತು-ಕತೆಗೆ ಮೊದಲಾಯಿತು. ಅವಳ ಅಕ್ಕ ತನ್ನ ತಂದೆಯನ್ನು ಕೇಳಿದಳು: " ಅಪ್ಪಾ, ಸುಕುವನ್ನು ನಮ್ಮ ವೀರೇಂದ್ರನಿಗೆ ಕೊಟ್ಟು ಮದುವೆ ಮಾಡಿದರೆ ಆಗುವುದಿಲ್ಲವೆ ? "

" ಸ್ವಗೋತ್ರದಲ್ಲಿ ಎಲ್ಲಿಯಾದರೂ ವಿವಾಹವಾಗುವುದುಂಟೇ ಹುಚ್ಚಿ ?" ಅವರೆಂದರು.

" ಏಕೆ ? ಪರಿತೋಷಣ್ಣನದು ಆಗಿದೆಯಲ್ಲ ! "

" ಅವರು ಬ್ರಾಹ್ಮರು. "

" ನಮ್ಮಲ್ಲಿ ಎಂದೆಂದಿಗೂ ಆಗಲೇ ಕೂಡದೊ ? "

" ಇಲ್ಲ. ಎಂದಾದರೂ ಉಂಟೆ ? "

" ಆದರೆ, ಆದರೆ ನೆಟ್ಟಗಾಗುತ್ತಿತ್ತು. "

" ಅದನ್ನು ಬಲ್ಲೆ. ಆಗಿದ್ದರೆ ಅಕ್ಕ-ತಂಗಿಯರಿಬ್ಬರೂ ಒತ್ತಟ್ಟಿಗೇ ಇರುತ್ತಿದ್ದಿರಿ. ಆದರೆ ಹಾಗಾಗುವುದಕ್ಕೆ ಮಾರ್ಗವಿಲ್ಲ "

ಅಕ್ಕನು ಹತಾಶಚಿತ್ತದಿಂದ ನಿಡಿದಾಗಿ ಉಸಿರ್ಗರೆದು ಸುಮ್ಮನಾದಳು. ಮನೋಭವನು ಮಿಲನದ ಭಾರವನ್ನು ವಹಿಸಿಕೊಳ್ಳುತ್ತಿರುವಾಗ ನಮ್ಮ ದೇಶದ ಪ್ರಜಾಪತಿ ಈ ರೀತಿ ವಿರೋಧ ಸಾಧಿಸುವನೇಕೆ ?

ಸುಕುಮಾರಿಯ ಮದುವೆಯ ಸಂಬಂಧ ನಿಶ್ಚಿತವಾಯಿತು. ತರುವಾಯ ಒಂದು ದಿನ ವೀರೇಂದ್ರನು ಆಕೆಯ ಮನೆಯ ಕಡೆ ಹೋದ. ನಗುನಗುತ್ತ ಅವಳೆಂದಳು: " ಗೆಳೆಯಾ, ನಿನಗೊಂದು ಆನಂದದ ಸುದ್ದಿಯಿದೆ. "

" ಏನು ಗೆಳತೀ, ಅದೇನು ? " ವೀರೇಂದ್ರನು ಅತಿಶಯವಾದ ಆತುರದಿಂದ ಕೇಳಿದ.

" ನನ್ನ ಮದುವೆ ! "

ಅವಳ ಅಕ್ಕನು ಹುಬ್ಬುಗಂಟಿಕ್ಕಿ ನುಡಿದಳು: " ಸುಟ್ಟ ಹುಡಿಗಿ ! ಎಲ್ಲದರಲ್ಲಿಯೂ ಹುಡುಗಾಟಿಕೆ ! "

ಸುಕುಮಾರಿಯ ಕಣ್ಣುಗಳು ಹನಿಗೂಡಿದವು. ಬಾಯಿಂದ ಗಟ್ಟಿಯಾಗಿ ನಗುತ್ತ ಅವಳೆಂದಳು: " ಭಲೆ, ನನ್ನ ಮದುವೆ; ನನ್ನ ಗೆಳೆಯನಿಗೆ ಇಂಥ ಆನಂದದ ಸುದ್ದಿಯನ್ನು ಹೇಳಬಾರದೆ ? "

ವೀರೇಂದ್ರನೂ ಗೂಢ ಅಂತರ್ವೇದನೆಯನ್ನು ಹಗುರುಗೊಳಿಸುವ ವ್ಯರ್ಥ ಪರಿಶ್ರಮದಿಂದ ಒತ್ತಾಯದಿಂದ ನಗಲು ಹವಣಿಸುತ್ತ ಮಾತನಾಡಿದ " ಎಂದು ಗೆಳತಿ, ಎಂದು ? " ಮಾತನಾಡುವಾಗ ಅವನ ದನಿ ಕಂಪಿಸಿತು.

ಸುಕುಮಾರಿ ಕಟಾಕ್ಷವನ್ನು ಬೀರಿ ನಕ್ಕು ಉತ್ತರವಿತ್ತಳು: " ಔತಣ ಬರುವುದು, ಗೊತ್ತು ಆಗಿಯೇ ಆಗುವುದು. "

ಅಕ್ಕನು ತಂಗಿಯ ಕಡೆಗೆ ತಿರಸ್ಕಾರದ ನೋಟವನ್ನೆಸೆದಳು. ಆದರೆ ನೋಡನೋಡುವಷ್ಟರಲ್ಲಿ ಅವಳ ಕಣ್ಣುಗಳಲ್ಲಿಯ ತಿರಸ್ಕಾರ ಕಣ್ಣೀರಿನಲ್ಲಿ ಮುಳುಗಿಹೋಯಿತು.

ಸಹಾನುಭೂತಿಯ ಸ್ಪರ್ಶದಿಂದ ಸುಕುಮಾರಿಯ ರುದ್ಧ ವೇದನೆಯ್ಯ ಕಟ್ಟು ಒಡೆದುಬಿಟ್ಟಿತು. ಅವಳು ಅಕ್ಕನ ತೊಡೆಯಲ್ಲಿ ಮುಖವನ್ನು ಮರೆಯಿಸಿದಳು. ವೀರೇಂದ್ರನು ಮೆಲ್ಲಮೆಲ್ಲನೆ ಆ ಸ್ಥಳವನ್ನು ಬಿಟ್ಟು ತೆರಳಿದ.

ಸುಕುಮಾರಿಗೆ ಗೊತ್ತಾದ ವರನ ಹೆಸರು ಸಂತೋಷ. ಅವನು ಈ ವರುಷದಲ್ಲಿಯೇ ಡೆಪ್ಯುಟಿ ಮ್ಯಾಜಿಸ್ಟ್ರೇಟನಾಗಿ ನಿಯುಕ್ತನಾಗಿದ್ದ. ಅವನ್ನು ವೀರೇಂದ್ರನ ಸಹಪಾಠಿಯೇ. ಆದರೆ ಬಹಳ ಕಾಲದಿಂದ ಇಬ್ಬರೂ ಒಬ್ಬರನ್ನೊಬ್ಬರು ಕಂಡಿರಲಿಲ್ಲ ವೀರೇಂದ್ರನು ಹಠಾತ್ತಾಗಿ ಪತ್ರಮುಖೇನ ಅವನೊಡನೆ ಸಂಬಂಧವನ್ನು ಬೆಳೆಸಿದ.

ಮದುವೆಗಾಗಿ ಸಂತೋಷನು ಕಲಕತ್ತೆಗೆ ಬಂದ. ವೀರೇಂದ್ರನು ಅವನನ್ನು ಕಾಣುವುದಕ್ಕೆ ಹೋದ. " ಓಹೋ ವೀರೇಂದ್ರ, ನನ್ನ ಮದುವೆ, ನೀನು ಕೇಳಿದ್ದೀಯಾ ? " ಎಂದು ಕೇಳಿದ ಸಂತೋಷ.

" ಎಂದೋ ? ಎಲ್ಲಿಯೋ ? " ನಗುತ್ತ ವೀರೇಂದ್ರನೆಂದ.

" ಇದೇ ಭವಾನೀಪುರದ ರಮೇಶ ವಕೀಲರ ಮನೆಯಲ್ಲಿ. ಶನಿವಾರವೇ ಮದುವೆ. ನೀನು ನಿಬ್ಬಣಿಗನಾಗಿ ಬರಬೇಕು ಮತ್ತೆ, ಈಗಲೇ ಹೇಳಿರುತ್ತೇನೆ. "

" ಖಂಡಿತ ಬರುತ್ತೇನೆ. ಕನ್ನೆಯನ್ನು ನೋಡಿದ್ದೀಯಾ ? "

" ನೋಡದೆ ಉಂಟೆ ? "

" ಹೇಗೆ ? "

"A veritable Rosalind is she !
By heavenly synod was devis'd,
Heaven would she many gifts should have
And I to live and die her slave !"

ವೀರೇಂದ್ರನು ನಕ್ಕು ನುಡಿದ: " ಕವಿ ನಿಜ ನೋಡು. ಬರಿ ನೋಡಿಯೇ ಇಷ್ಟು ! ಗುರುತಾಯಿತೆಂದರೆ ಪೂರಾ orlandsನಂತೆ ಹುಚ್ಚು ಹಾಡಾಗುವುದೆಂದು ನಿಚ್ಚಳವಾಗಿ ಕಾಣುತ್ತಿದೆ. "

ಸಂತೋಷನೂ ನಕ್ಕು ವೀರೇಂದ್ರನ ಭುಜವನ್ನು ಹಿಡಿದು ಅಲುಗಾಡಿಸಿ ಮಾತನಾಡಿದ: " ಪ್ರೇಮತತ್ವವನ್ನು ನೀನೇನು ಬಲ್ಲೆ ಮಿತ್ರಾ ! ಬರೀ ದೇಶದೊಳಗಿನ ನಿರ್ಜೀವ ಹಾರ್ಟುಗಳನ್ನು ಕೊಯ್ದು ಪರೀಕ್ಷಿಸುವುದರಲ್ಲಿಯೆ ಸಾಯುತ್ತೀ, ಜೀವಂತ ಹಾರ್ಟನ್ನು ನೋಡಿಯೇ ಇಲ್ಲ. ನೋಡಿದರೆ ತಿಳಿಯುತ್ತದೆ. "

" ಇರಲಿ ಮಿತ್ರ, ನಿನ್ನ ತಿಳಿವಳಿಕೆ ನಿನಗಿರಲಿ. ನನಗದನ್ನು ತಿಳಿಯುವ ಅಗತ್ಯವಿಲ್ಲ. ನಿನ್ನ ಅವಸ್ಥೆ ಎಷ್ಟು ಕ್ಷೀಣವಾದಂತಿದೆ— ನಿನ್ನ ಮಿತ್ರ ನಾನು. ನಿನ್ನ ಪ್ರೇಯಸಿಗೆ ಏನು ಉಪಹಾರ ಕೊಡಬೇಕು ಹೇಳು—a heart pierced through and through by an arrow —ಹೇಗೆ ? "

" ಭಲೆ, a capital poetic idea ! " ವೀರೇಂದ್ರನ ಬೆನ್ನು ಚಪ್ಪರಿಸುತ್ತ ಸಂತೋಷನೆಂದ.

ಮನೆಗೆ ಹೋದ ಬಳಿಕ ವೀರೇಂದ್ರ ಅತ್ತಿಗೆಗೆಂದ: " ಅತ್ತಿಗೆ, ಮತ್ತೆ ಸುಕುಮಾರಿಯ ಮದುವೆ ಶನಿವಾರನಂತೆ. "

ಅತ್ತಿಗೆ ಕಾತರ ದೃಷ್ಟಿಯಿಂದ ಅವನ ಮೊಗವನ್ನು ನೋಡುತ್ತ "ಯಾರು ಹೇಳಿದರು ?" ಎಂದು ಕೇಳಿದಳು.

"ಸಾಕ್ಷಾತ್ ವರನೇ ಹೇಳಿದ."

"ಇದೇನಿದು ! ಅವನ ಗುರುತು ನಿನಗೆಲ್ಲಿ ಆಯಿತು ?"

"ಅವನು ನನ್ನ ಸಹಪಾಠಿ ಅತ್ತಿಗೆ."

"ನೀನು ಸುಕುಮಾರಿಯ ಗುರುತಿನವನೆಂದು ಅವನಿಗೆ ಗೊತ್ತಿದೆಯೆ ?"

"ಇಲ್ಲ ಅತ್ತಿಗೆ, ಆ ಸಂಗತಿಯನ್ನಿನ್ನೂ ಬಹಿರಂಗಪಡಿಸಿಲ್ಲ. ಮದುವೆಯಾದ ಬಳಿಕ ಅವನನ್ನು ದಂಗುಬಡಿಸಬೇಕಾಗಿದೆ. ಮದುವೆ ಕಾಲಕ್ಕೆ ಸುಕುವಿಗೆ ನಾನೇನು ಉಡುಗೊರೆ ಕೊಡಬೇಕೆಂದು ಮಾಡಿದ್ದೇನೆ ಗೊತ್ತಿದೆಯೆ ಅತ್ತಿಗೆ ?"

"ಇಲ್ಲ. ಏನು ?"

"ಒಂದು ಬ್ರೂಚ್—ಒಂದು ಬಾಣವಿದ್ಧ ಹೃದಯ. ಹೇಗೆ ಅತ್ತಿಗೆ, ಸರಿಯಾಗುವುದಲ್ಲವೆ ?"

"ಛೀ, ಎಲ್ಲದರಲ್ಲಿಯೂ ನಿಮ್ಮದು ವಿನೋದವೆ ! ಸ್ವಂತ ದುಃಖಕ್ಕೂ ಆ ವಿನೋದದಿಂದ ಬಿಡುಗಡೆಯಿಲ್ಲ !"

"ಬಿಡುಗಡೆಯಿಲ್ಲವೆಂದೇ ಬದುಕಿದ್ದೇನೆ ಅತ್ತಿಗೆ ! ಇಲ್ಲದಿದ್ದರೆ, ಮುಖ ಬಾಡಿಸಿಕೊಂಡು ಹಗಲಿರುಳೂ ನಿಟ್ಟುಸಿರುಗರೆಯುತ್ತ ಕಣ್ಣೀರು ಸುರಿಸುತ್ತ ಇದ್ದಿದ್ದರೆ, ಜನರು ನನ್ನನ್ನು ಹುಚ್ಚನೆಂದು ತಿಳಿಯುತ್ತಿದ್ದರೋ ಇಲ್ಲವೋ ನೀನೇ ಹೇಳು. ದುಃಖದ ಮೇಲೆ ಮತ್ತೆ ಅಪಮಾನ—ಇದೇನು ವಾಂಛನೀಯ ವಿಷಯವಲ್ಲ, ಅತ್ತಿಗೆ !"

"ಮದುವೆಗೆ ಬರುವೆಯಾ ?"

"ಬರುವುದಿಲ್ಲವೇ ಅತ್ತಿಗೆ, ನಿನ್ನದೆಂಥ ಮಾತು ? ಸಂತೋಷ ಔತಣ ಕೊಟ್ಟಿದ್ದಾನೆ, ಸುಕು ಕರೆಯುತ್ತಾಳೆ, ನೀನೂ ಕರೆಯುತ್ತೀ—"

"ಇಲ್ಲ, ನಾನು ಕರೆಯುವುದಿಲ್ಲ. ಬರಬೇಡವೆಂದೇ ಹೇಳುತ್ತೇನೆ. ಸುಕುಮಾರಿಗೂ ಹೇಳುವೆ—ನಿನಗೆ ಬರಬೇಡವೆಂದು ಹೇಳಲಿಕ್ಕೆ."

" ಬೇಡ ಬೇಡ ಅತ್ತಿಗೆ, ಹಾಗಾಗುವುದುಂಟೆ ? ನಾನು ಬರಲೇಬೇಕು. ನಾನು ಗಂಡಿನ ನಿಬ್ಬಣದವ "

" ಕಣ್ಣಾರೆ ನೋಡುವೆಯಾ ? "

" ಹಾಂ, ಚೆನ್ನಾಗಿ ನೋಡಬಲ್ಲೆ. ಆತ್ಮಹತ್ಯ ಮಾಡಿಕೊಳ್ಳಲು ಉದ್ಯುಕ್ತನಾದ ಮನುಷ್ಯನಿಗೆ ಕೊಲೆಯ ಭಯವೇತರದು ಅತ್ತಿಗೆ ? "

ಅತ್ತಿಗೆ ಮತ್ತೆ ಯಾವ ಮಾತನ್ನೂ ಆಡಲಿಲ್ಲ.

ಮದುವೆಯ ಸಿದ್ಧತೆಯೆಲ್ಲ ಆದಂತಾಯಿತು. ವೀರೇಂದ್ರನು ಅತ್ತಿಗೆಯನ್ನು ಮದುವೆಮನೆಗೆ ಕಳಿಸಿ ಬರಲು ಹೋದ. ಸುಕುಮಾರಿ ಬಂದು ನಗುತ್ತ ಹೇಳಿದಳು: " ಇದೇ ಶನಿವಾರ—ಗೆಳೆಯಾ ! "

" ಗೊತ್ತಿದೆ ಗೆಳತೀ, ಗೊತ್ತಿದೆ. " ವೀರೇಂದ್ರನೂ ನಗುತ್ತ ನುಡಿದ.

" ಇಷ್ಟರೊಳಗೇ ನಿನಗೆಲ್ಲಿ ತಿಳಿಯಿತು ಸುದ್ದಿ ? "

" ಏಕೆ, ನಿನ್ನ ಮದುವೆಯ ವರ್ತಮಾನ ನಿನ್ನೊಬ್ಬಳದೇ ಸೊತ್ತೇನು ? ಬೇರೆ ಯಾರಿಗೂ ಅದು ಗೊತ್ತಿರಬಾರದೇನು ? "

" ಅಲ್ಲ, ನಿಜವಾಗಿ ಹೇಳಲ್ಲ, ಯಾರಿಂದ ತಿಳಿಯಿತು ? "

" ಏಕೆ, ಸಂತೋಷನಿಂದ. "

" ಅವ್ವಯ್ಯಾ, ಇಷ್ಟರಲ್ಲಾಗಲೇ ಆ ಪಕ್ಷವನ್ನು ವಶಪಡಿಸಿಕೊಂಡಂತೆ ತೋರುತ್ತದೆ ? ಅವರ ಸಂಬಂಧ ಹೇಗೆ ಉಂಟಾಯಿತು ? "

" ನೀನು ತೀರ ಅಪರಿಚಿತರ ಕಡೆ ಹೋಗಿ ಸಂಬಂಧ ಬೆಳಸಿಕೊಳ್ಳಬಹುದು; ನಾನು ಮಾತ್ರ ನನ್ನ ಸಹಪಾಠಿಯೊಡನೆ ಸಂಬಂಧ ಬೆಳಸಿಕೊಳ್ಳಲಾರೆನೆ ? "

" ಓ ! ಸಂತೋಷಬಾಬು ನಿನ್ನ ಸಹಪಾಠಿಗಳು ಹಾಗಾದರೆ ! "

" ಸಂತೋಷಬಾಬುಗಳೇ ? ಏನು ಲಜ್ಜೆಬಿಟ್ಟ ಹೆಣ್ಣು ! ಸ್ವಾಮಿನ್, ಪ್ರಭೂ, ಹೃದಯೇಶ್ವರ ! "

" ಮೊದಲಿನವೆರಡೆನ್ನು, ಕೊನೆಯದಲ್ಲ. " ಎಂದವಳೇ ಸುಕುಮಾರಿ ಓಡಿ ಹೋದಳು.

ಶನಿವಾರ. ಸುಕುಮಾರಿಯ ಮದುವೆ ಈ ದಿನ. ವೀರೇಂದ್ರನು ಮತ್ತೆ

ಧ್ಯಂಡಿನ ನಿಬ್ಬಣಿಗನಾಗಿ ಬಂದಿದ್ದಾನೆ. ಅಣ್ಣನ ಮದುವೆಗೆ ಬಂದು ಅವನು ಸುಕುಮಾರಿಯ ಹೃದಯವನ್ನು ಗೆದ್ದುಕೊಂಡಿದ್ದ. ಇಂದು ಸುಕುಮಾರಿಯ ಮದುವೆಗೆ ಬಂದು ತನ್ನ ಸೋಲನ್ನು ನೋಡುತ್ತಿದ್ದಾನೆ. ಅದೇ ಮನೆಯೊಳಗೆ ಅದೇ ಸ್ಥಳದಲ್ಲಿ—ಒಂದು ವರುಷದ ಹಿಂದೆ ಸುಕುಮಾರಿ ಹೂವಿನ ಬೀಸಣಿಗೆ ಹಿಡಿದು ಅಕ್ಕನಹತ್ತಿರ ನಿಂತು ವಧೂ-ವರರಿಗೆ ಗಾಳಿ ಹಾಕುತ್ತಿದ್ದ ಸ್ಥಳದಲ್ಲಿ-ಈಗ ಸುಕುಮಾರಿ ಹೂವಿನ ತೊಡವುಗಳನ್ನು ಧರಿಸಿ ವಧೂವೇಷದಲ್ಲಿ ಕುಳಿತಿದ್ದಾಳೆ ಇಂದು ಅದೇ ಮೂಲೆಯಲ್ಲಿ-ಹಿಂದಕ್ಕೆ ವೀರೇಂದ್ರನು ಅಣ್ಣನ ಮದುವೆಯನ್ನು ನೋಡಲು ನಿಂತು ಸುಕುಮಾರಿಯ ಕಡೆ ಶುಭ ದೃಷ್ಟಿಯನ್ನು ಬೀರಿದ ಸ್ಥಳದಲ್ಲಿ—ಅವನು ನಿಂತಿದ್ದಾನೆ. ಅಂದವನು ಅಪರಿಚಿತಳಾದ ಅವಳ ಕಡೆಗೆ ಹೋಗುತ್ತಲಿದ್ದ. ಇಂದು ಸುಪರಿಚಿತನಾಗಿಯೂ ದೂರ ಹೋಗುತ್ತಲಿದ್ದಾನೆ; ಯಾವನೋ ಅಪರಿಚಿತನೊಬ್ಬನು ಸುಕುಮಾರಿಯೊಡನೆ ಆಜೀವನ ಪರಿಚಯವನ್ನು ಪ್ರಸ್ಥಾಪಿಸಲು ಸಮೀಪಿಸುತ್ತಿದ್ದಾನೆ ಇಂದೂ ಸುಕುಮಾರಿ ತನ್ನ ಲಜ್ಜಾನತ ಮುಖವನ್ನು ಮೇಲೆತ್ತಿದಾಗೊಮ್ಮೆ ಕೊನೆಗಣ್ಣಿಂದ ನೋಡುತ್ತಿದ್ದಾಳೆ—ವೀರೇಂದ್ರನು ಕೈಗಳೆರಡನ್ನೂ ಎದೆಯ ಮೇಲೆ ಕಟ್ಟಿಕೊಂಡು ಮಿಸುಕದೆ ನಿಂತಿದ್ದಾನೆ, ಗಭೀರ ಭಾವದಿಂದ ಎವೆಯಿಕ್ಕದೆ ಅವಳ ಕಡೆಗೇ ದಿಟ್ಟಿಸುತ್ತಿದ್ದಾನೆ. ಪ್ರಜಾಪತಿಯ ಪರಿಹಾಸ !

ಮದುವೆಯಾಯಿತು. ವರ-ಕನ್ಯೆಯರು ವಾಸರಗೃಹದಲ್ಲಿದ್ದರು ಈಗ ವೀರೇಂದ್ರನನ್ನು ವಾಸರಗೃಹಕ್ಕೆ ಹಾದಿ ತೋರಿಸುತ್ತ ಕರೆದೊಯ್ಯಲು ಯಾವ ಹೃದಯವೂ ಉತ್ಸುಕವಾಗಿಲ್ಲ; ಏನಾದರೂ ನೆವ ಹುಡುಕಿಕೊಂಡು ಯಾರೂ ಸುಳಿದಾಡುತ್ತಿಲ್ಲ. ಅಷ್ಟು ಜನಸಂದಣಿಯ ಮಧ್ಯದಲ್ಲಿ ವೀರೇಂದ್ರನು ಈಗ ಏಕಾಕಿ. ಅವನು ಯಾರಿಗೂ ತಿಳಿಯದಂತೆ ಮನೆಗೆ ಹೊರಟುಹೋದ. ಆ ಎಣೆಯಿಲ್ಲದ ಜನರೊಳಗೆ ಒಬ್ಬಳೇ ಒಬ್ಬಳು ವ್ಯಥಿತ ಚಿತ್ತದಿಂದ ವೀರೇಂದ್ರನನ್ನು ಆರಸುತ್ತಿದ್ದಳು—ಆಕೆ ಅವನ ಅತ್ತಿಗೆ.

ಮದುವೆಯಾದ ಬಳಿಕ ವೀರೇಂದ್ರನು ತಿರುಗಿ ಸಂತೋಷನ ಮನೆಗೆ ಹೋಗಲಿಲ್ಲ. ಸಂತೋಷನೇ ಅವನ ಮನೆಗೆ ಬಂದ. " ಏನೋ, ಎಷ್ಟೋ ದಿನಗಳಾದವಲ್ಲ, ನನಗೆ ಮೋರೆಯನ್ನೇ ತೋರಿಸಿಲ್ಲ ನೀನು. ಇಂದು ನಿನಗೆ ಔತಣ ಕೊಡಲು ಬಂದೆ. ಇಂದು ' ಬೌ ಭಾತು. ' ಸ್ವಲ್ಪ ಬೇಗನೇ ಬಂದುಬಿಡು ಮತ್ತೆ. "

ವೀರೇಂದ್ರನು ಸುಕುಮಾರಿಯ 'ಬೌಭಾತಿ'ನ ಔತಣವನ್ನು ಸ್ವೀಕರಿಸಲು ಹೋದ—ಪ್ರಜಾಪತಿಯ ಪರಿಹಾಸ !

ಸಂತೋಷನು ಒಂದು ಕೋಣೆಯಲ್ಲಿ ಸುಕುಮಾರಿಯೊಂದಿಗೆ ಕುಳಿತು ಮಾತನಾಡುತ್ತಿದ್ದ. ವೀರೇಂದ್ರನು ಬಂದನೆಂಬ ಸುದ್ದಿಯನ್ನು ಕೇಳಿ ಸಂತೋಷನು "ವೀರೇಂದ್ರನನ್ನು ಇಲ್ಲಿಯೇ ಕರೆದುಕೊಂಡು ಬಾ." ಎಂದು ಹೇಳಿದ.

ಸುಕುಮಾರಿ ಎದ್ದು ಹೊರಡುತ್ತಿದ್ದಳು. ಅವಳ ಕೈಯನ್ನು ಹಿಡಿದು ಸಂತೋಷನೆಂದ: "ಎಲ್ಲಿ ಓಡಿ ಹೋಗುತ್ತೀ ? ವೀರೇಂದ್ರ ಎಂದರೆ ಹುಲಿ-ಕರಡಿಯ ಹೆಸರಲ್ಲ. ನನ್ನೊಬ್ಬ ಗೆಳೆಯ. ಅವನ ಪರಿಚಯ ಮಾಡಿಕೊಡುತ್ತೇನೆ ನಿನಗೆ. ಒಳ್ಳೇ ರಸಿಕ ವಿನೋದೀ ಮನುಷ್ಯ"

ಸುಕುಮಾರಿಯ ಮುಖ ಕೆಂಪಾಯಿತು, ಹೃದಯವು ಚಂಚಲವಾಯಿತು. ವಧುಗಳಿಗೆ ಸ್ವಾಭಾವಿಕವಾದ ಲಜ್ಜೆಯೆಂದು ಸಂತೋಷನು ತಿಳಿದುಕೊಂಡ.

ವೀರೇಂದ್ರನು ಕೋಣೆಯೊಳಗೆ ಅಡಿಯಿಡುತ್ತಲೇ ನೋಡಿದ— ಸಂತೋಷನು ಒಂದು ಸೋಫಾದ ಮೇಲೆ ಕುಳಿತಿದ್ದ, ಸುಕುಮಾರಿ ಅವನ ಬದಿಯಲ್ಲಿ ನಿಂತಿದ್ದಳು, ಅವಳದೊಂದು ಕೈ ಸಂತೋಷನ ಹಿಡಿಯೊಳಗಿತ್ತು ವೀರೇಂದ್ರನು ಬೆಚ್ಚಿ ಅಲ್ಲಿಯೇ ನಿಂತುಬಿಟ್ಟ.

ಸಂತೋಷನು ನಗುತ್ತ ನುಡಿದ: "ನೀನು ಹೆಸರಿಗೆ ಮಾತ್ರ ವೀರೇಂದ್ರ, ಸಾಹಸವೆಂಬುದು ರವಷ್ಟೂ ಇದ್ದಂತೆ ಕಾಣುವುದಿಲ್ಲ ಬಾರೋ, ಬಾ."

ವೀರೇಂದ್ರನೊಮ್ಮೆ ಚಕಿತನಾಗಿ ಸುಕುಮಾರಿಯ ಕಡೆಗೆ ನೋಡಿ ಕೋಣೆಯೊಳಗೆ ಹೋಗಿ ಒಂದು ಚೌಕಿಯಲ್ಲಿ ಕುಳಿತುಕೊಂಡ.

"ಬಾ ವೀರೇಂದ್ರ, ನಿಮ್ಮಿಬ್ಬರಿಗೂ ಪರಸ್ಪರ ಗುರುತು ಮಾಡಿ ಕೊಡುತ್ತೇನೆ—ಇವರು —"

ವೀರೇಂದ್ರನು ಸಂತೋಷನ ಮಾತನ್ನು ತಡೆದ. "ಸಾಕು, ಸುಕುಮಾರಿಯೊಡನೆ ನನ್ನ ಪರಿಚಯ ನೀನು ಮಾಡಿಕೊಡಬೇಕಾಗಿಲ್ಲ. ಅವಳು ನಿನ್ನನ್ನೆಷ್ಟು ಬಲ್ಲಳೋ ಅದಕ್ಕಿಂತ ಎಷ್ಟೋ ಪಟ್ಟು ನನ್ನನ್ನು ಬಲ್ಲಳು." ಎಂದ.

ಸಂತೋಷನು ಅಪ್ರತಿಭನಾಗಿ "ಹೀಗೇನು ?" ಎಂದು ಸುಕುಮಾರಿಯ ಕಡೆ ಹೊರಳಿ ನೋಡಿದ. ಅವಳ ಮುಖಕ್ಕೆ ನಾಚಿಕೆಯ ಕೆಂಪೇ

ರಿತ್ತು. “ ನಿನಗೂ ಈಕೆಗೂ ಪರಿಚಯ ಹೇಗಾಯಿತು ? ” ಸಂತೋಷನ್ನ ವೀರೇಂದ್ರನನ್ನು ಕೇಳಿದ.

“ ಸುಕೂನ ಅಕ್ಕ ನನಗೆ ಅತ್ತಿಗೆಯಾಗಬೇಕು. ಇಷ್ಟೇ ಏನು ? ಸುಕು ನನ್ನ ಮಿತ್ರಳು. ನಾನು ಇವಳನ್ನು ಎಷ್ಟು ಪ್ರೀತಿಸುತ್ತೇನೋ ನೀನು ಇಡೀ ಜೀವನದಲ್ಲಿ ಎಂದಾದರೂ ಪ್ರೀತಿಸೀಯೋ ಇಲ್ಲವೋ ಸಂದೇಹವೇ. ನಿಜವೋ ಸುಳ್ಳೋ ಬೇಕಾದರೆ ಸುಕುವನ್ನೇ ಕೇಳು. ”

ಸಂತೋಷನು ಅವಾಕ್ಕಾಗಿ ವೀರೇಂದ್ರನ ಮುಖವನ್ನೊಮ್ಮೆ, ಸುಕುಮಾರಿಯ ಮುಖವನ್ನೊಮ್ಮೆ ನೋಡಿದ. ವೀರೇಂದ್ರನು ದಿವ್ಯ ಸಪ್ರತಿಭ ಭಾವದಿಂದ ಕುಳಿತುಕೊಂಡು ನಗುತ್ತಿದ್ದ. ಸುಕುಮಾರಿ ಲಜ್ಜೆಯಿಂದ ಕೆಂಪಾಗಿದ್ದಳು. ಸಂತೋಷನು ಗಂಭೀರನಾಗಿಬಿಟ್ಟ—ಮದುವೆ ಮಾಡಿಕೊಂಡು ಇಂತಹ ವಿಪತ್ತಿನಲ್ಲಿ ಮತ್ತೆ ಯಾರಾದರೂ ಬಿದ್ದಿರಬಹುದೇನು ? ಪಾಪ, ಒಬ್ಬ ವಧುವನ್ನು ಮನೆ ತುಂಬಿಸಿಕೊಂಡ, ಆದರೆ ಅವಳ ಹೃದಯ ಇನ್ನೊಬ್ಬನಲ್ಲಿ ಸೆರೆಯಾಗಿದೆ !

“ ನಿಮ್ಮಿಬ್ಬರಲ್ಲಿಯೂ ಇಷ್ಟೊಂದು ಪ್ರೇಮವಿದ್ದಿದ್ದರೆ, ಮದುವೆಯನ್ನೇಕೆ ಮಾಡಿಕೊಳ್ಳಲಿಲ್ಲ ? ” ಕೊಂಚ ಹೊತ್ತಿನ ಮೇಲೆ ಸಂತೋಷನು ಕೇಳಿದ.

“ ಆಗುವಂತಿರಲಿಲ್ಲವಯ್ಯಾ, ಪ್ರಜಾಪತಿಯ ಶಾಪ— ಸುಕು ನನ್ನ ಸ್ವಗೋತ್ರಳು. ”

ಮುಂದೆ ಏನು ಮಾತನಾಡಬೇಕೆಂಬುದು ಸಂತೋಷನಿಗೆ ಹೊಳೆಯಲಿಲ್ಲ. ವೀರೇಂದ್ರನೇ ನಿಃಸ್ತಬ್ಧತೆಯನ್ನು ಮುರಿದು ಮಾತನಾಡಿದ: “ ಈ ವಿಷಯವನ್ನೇ ನಿನಗೆ ಹೇಳುವುದು ಅಗತ್ಯವೆಂದು ನನಗೆನಿಸಿತ್ತು. ಏಕಪ್ರಾಣ ಪ್ರೇಮವನ್ನು ಹೃದಯದಲ್ಲಿ ಬಚ್ಚಿಟ್ಟುಕೊಂಡು, ಕಳ್ಳನಂತೆ ನಿನ್ನ ಅಂತಃಪುರಕ್ಕೆ ಬಂದು ಹೋಗಿ ಮಾಡುವುದು ನನಗೆ ಅನುಚಿತ. ಎಲ್ಲವನ್ನೂ ಹೇಳಿ ನಾನು ಮುಕ್ತನಾಗಿದ್ದೇನೆ. ಇನ್ನು ನೀನು ಬೇಡವೆಂದರೆ ನಾನು ಸುಕುಮಾರಿಯ ನೆರಳನ್ನೂ ನೋಡುವುದಿಲ್ಲ. ”

ವೀರೇಂದ್ರನು ಎದ್ದು ನಿಂತು ಉತ್ತರದ ಪ್ರತೀಕ್ಷೆಯಿಂದ ಸಂತೋಷನ ಮೊಗವನ್ನು ನೋಡಿದ. ವೀರೇಂದ್ರನ ಕೈಯನ್ನು ಹಿಡಿದು ಅವನೆಂದ: “ ಎಲ್ಲಿ ಹೋಗುತ್ತೀ, ಕುಳಿತುಕೋ. ನೀನು ನಿರ್ವಂಚನೆಯಿಂದ ವಾಸ

ವಾಂಶವನ್ನು ಬಿಚ್ಚಿ ಹೇಳಿಬಿಟ್ಟಿದ್ದೀ. ಇನ್ನು ನಿನ್ನ ಮೇಲೆ ನನ್ನ ಮನದಲ್ಲಿ ಸಂದೇಹಕ್ಕೆ ಎಡೆಯಿಲ್ಲದಾಯಿತು. ನೀನು ಹೇಳದೆ ಬಿಟ್ಟಿದ್ದರೇನಾಗುತ್ತಿತ್ತು?— ನೀನು ಏನೂ ಸಂಕೋಚವಿಲ್ಲದೆ ಬರಬಹುದು, ನಾನು ಇದ್ದರೂ ಸರಿ ಇಲ್ಲದಿದ್ದರೂ ಸರಿ. ಸುಕು ನಿನ್ನ ಮಿತ್ರಳು ! ”

ಬಳಿಕ ಸುಕುಮಾರಿಯ ಕಡೆ ತಿರುಗಿ ಸಂತೋಷನೆಂದ: “ ನಿನ್ನ ಮಿತ್ರನ ಭಾರ ನಿನ್ನ ಮೇಲೆ. ಇವನಿಗೆ ಸ್ವಲ್ಪ ಫಲಾಹಾರ ಕೊಡು. ನಾನು ಕೊಂಚ ಹೊರಗೆ ಹೋಗಿ ಯಾರು ಬಂದರು ಯಾರು ಇಲ್ಲ ನೋಡಿಕೊಂಡು ಬರುತ್ತೇನೆ ”

ವೀರೇಂದ್ರನ ಕಪಟವಿಲ್ಲದ ಶುದ್ಧತೆಯನ್ನು, ಸಂತೋಷನ ಉದಾರ ವಿಶ್ವಾಸವನ್ನು ಕಂಡು ಸುಕುಮಾರಿಯ ಅಂತರಂಗವು ಭಕ್ತಿಯಿಂದ ಪರಿಪೂರ್ಣವಾಯಿತು. ಇಂದು ಪತಿಯಲ್ಲಿ ಅನುರಾಗವು ಪರಿಪೂರ್ಣತೆ ಹೊಂದಿ ಅವಳ ವಿವಾಹವು ಸಾರ್ಥಕವಾಯಿತು. ಅವಳು ಮನದೊಳಗೆ ಗಂಡನಿಗೆ ಅಭಿವಂದಿಸಿ ವೀರೇಂದ್ರನ ಉಪಹಾರಕ್ಕೆ ಅಣಿಗೊಳಿಸಲು ತೊಡಗಿದಳು. ಒಂದು ವರುಷದ ಹಿಂದೆ ವೀರೇಂದ್ರನಿಗೆ ಉಪಹಾರವನ್ನು ನೀಡಲು ಅವಳ ಜೀವ ಹೇಗೆ ಹರ್ಷಸರೋವರದಲ್ಲಿ ಮುಳುಗುತ್ತಿದ್ದಿತೋ, ಇಂದೂ ಹಾಗೆಯೇ— ಇಂದು ಅವಳಿಗೆ ವೀರೇಂದ್ರನೊಡನೆ ಹೊಸದಾಗಿ ಪರಿಚಯವಾದಂತಿದ್ದಿತು.

—